ಮೈಸೂರು ವಿಶ್ವವಿದ್ಯಾನಿಲಯ

 ಪ್ರಚಾರಪುಸ್ತಕಮಾಲೆ—೧೪೨

# ರತ್ನಾಕರ ಮಹಾಕವಿ

ಜಿ. ಬ್ರಹ್ಮಪ್ಪ, ಎಂ.ಎ.




ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೬೬

ಕ್ರಯ ೨೫ ಪೈಸೆ

ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರಪುಸ್ತಕಮಾಲೆ—೧೪೩

# ರತ್ನಾಕರ ಮಹಾಕವಿ

ಜಿ. ಬ್ರಹ್ಮಪ್ಪ, ಎಂ.ಎ.




ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೬೬

ಮೊದಲನೆಯ ಮುದ್ರಣ: ೧೯೬೬

೩,೦೦೦ ಪ್ರತಿಗಳು



ಸಾಧಾರಣ ಪ್ರತಿ: ೨೫ ಪೈಸೆ

ಉತ್ತಮ ಪ್ರತಿ: ೩೭ ಪೈಸೆ

ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಡೈರೆಕ್ಟರ್ ಅವರಿಂದ ಪ್ರಕಟಗೊಂಡಿದೆ.

ಮುದ್ರಕರು: ಡಿ. ರಾಜರತ್ನಂ

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ಮಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ "ಸೆನೇಟ್" ಸಭೆಯ ಪ್ರಾರಂಭೋತ್ಸವ ಸಮಯದಲ್ಲಿಯೂ ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿ ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕವಾದ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ ಸುಲಭಗ್ರಾಹ್ಯವೂ ಆದ ಕನ್ನಡಭಾಷೆಯ ಮೂಲಕ ತಿಳಿವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯಜನರಂತೆಯೇ ಇದ್ದು

ಕೊಂಡು, ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದವನ್ನುಂಟುಮಾಡುತ್ತಾರೆ. ಈ ಉಪನ್ಯಾಸಗಳು ವಿಶ್ವವಿದ್ಯಾನಿಲಯದ ಮೆಟ್ಟಲನ್ನು ಹತ್ತಲು ಅವಕಾಶವಿಲ್ಲದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯ ವನ್ನು ನೀಡಲು ನೆರವಾಗುತ್ತವೆ; ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕ ವಾಗುತ್ತವೆ; ನಮ್ಮ ಸಮಾಜದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆಯನ್ನು ಸ್ಥಾಪಿಸಲು ಸಹಾಯಕ ವಾಗುತ್ತವೆ; ವಿಶ್ವವಿದ್ಯಾನಿಲಯಕ್ಕೂ ಸಾಮಾನ್ಯ ಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗು ತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ದುಃಖಕ್ಕೆ ಮೂಲಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ, ವಿಶಾಲ ಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು, ಓದಿ ತಿಳಿವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿವೆ. ಪುಸ್ತಕಗಳು ಅಚ್ಚಿನ ಮನೆಯಿಂದ ಹೊರ ಬಿದ್ದ ಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೆ ಭೌತವಿಜ್ಞಾನ, ರಸಾಯನ ವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜ ವಿಜ್ಞಾನ, ಅರ್ಥಶಾಸ್ತ್ರ; ತತ್ತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ

ಮುಂತಾದ ವಿಷಯಗಳನ್ನು ಕುರಿತ ನೂರ ನಲವತ್ತೊಂದು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗುತ್ತದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಶ್ರೀ ಜಿ. ಬ್ರಹ್ಮಪ್ಪ ಅವರ ‘ ರತ್ನಾಕರ ಮಹಾಕವಿ ’ ಹೆಚ್ಚು ಜನಪ್ರಿಯವಾಗಲೆಂದು ನಾನು ಆಶಿಸುತ್ತೇನೆ.

ಮೈಸೂರು
೨೦–೪–೧೯೬೬

**ಕೆ. ಎಲ್. ಶ್ರೀಮಾಲಿ**
ವೈಸ್–ಛಾನ್ಸಲರ್.

# ನನ್ನ ಮಾತು

ರತ್ನಾಕರ ಮಹಾಕವಿಯನ್ನೂ ಆತನ ಕೃತಿಗಳನ್ನೂ ಕುರಿತು ನಾನು ಹತ್ತು ವರ್ಷಗಳಿಂದ ಸಂಶೋಧನೆ ನಡೆಸುತ್ತಿರುವೆನು. ಈಗಾಗಲೆ ನಾನು ಬರೆದ ರತ್ನಾಕರನ ಶತಕ ಸಾಹಿತ್ಯ ಅಚ್ಚಾಗಿ ಬೆಳಕಿಗೆ ಬಂದಿದೆ. "ವಿಶ್ವಕವಿ ರತ್ನಾಕರ" ಎಂಬ ಹೆಸರಿನಲ್ಲಿ ಭರತೇಶವೈಭವದ ರಸವಿಮರ್ಶೆ, ಬೃಹದ್‌ಗ್ರಂಥವಾಗಿ ನನ್ನಿಂದ ರೂಪಗೊಳ್ಳುತ್ತಿದೆ. ರತ್ನಾಕರನನ್ನು ಕುರಿತ ನನ್ನ ಸಂಶೋಧ ನೆಯ ರೂಪರೇಷೆಯನ್ನು "ರತ್ನಾಕರ ಮಹಾಕವಿ" ಎಂಬ ಕಿರುಹೊತ್ತಗೆಯ ರೂಪದಲ್ಲಿ ಕನ್ನಡಿಗರಿಗೆ ಅರ್ಪಿಸಿರುವೆನು. ಇದನ್ನು ಬೆಳಕಿಗೆ ತಂದ ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಡೈರೆಕ್ಟರವರಿಗೆ ನಾನು ಋಣಿಯಾಗಿರುವೆನು.

ಮಹಾವೀರ ಜಯಂತಿ

೩-೪-೧೯೬೬

ಜಿ. ಬ್ರಹ್ಮಪ್ಪ.

# ಸಂಕ್ಷಿಪ್ತ ಸೂಚಿ

ಆ. ಪು.=ಆದಿಪುರಾಣ
ಅ. ಶ.=ಅಪರಾಜಿತೇಶ್ವರ ಶತಕ
ಕ. ಚ.=ಕರ್ಣಾಟಕ ಕವಿಚರಿತೆ
ಕ. ಸಾ. ಚ.=ಕನ್ನಡಸಾಹಿತ್ಯಚರಿತೆ
ಕಿ.=ಕಿರಣ
ಜಿ. ವಿ.=ಜಿನವಿಜಯ, ಷೇಡಬಾಳ
ತ್ರಿ. ಶ.=ತ್ರಿಲೋಕ ಶತಕ
ಧ. ಅ.=ಧರ್ಮಾಮೃತ
ಪ್ರ. ಕ.=ಪ್ರಬುದ್ಧ ಕರ್ಣಾಟಕ
ಪೀ.=ಪೀಠಿಕೆ
ಪೂ. ಪು.=ಪೂರ್ವ ಪುರಾಣ
ಭ. ವೈ.=ಭರತೇಶ ವೈಭವ
ಭ. ವೈ. ಸಂ.=ಭರತೇಶ ವೈಭವ ಸಂಗ್ರಹ
ಮಂ.=ಮಂಡಲ
ಮು.=ಮುನ್ನುಡಿ
ರ. ಶ.=ರತ್ನಾಕರ ಶತಕ
ರ. ಶ. ಸಾ.=ರತ್ನಾಕರ ಶತಕ ಸಾಹಿತ್ಯ
ವಿ. ಅ.=ವಿವೇಕಾಭ್ಯುದಯ
ಶ. ತ್ರ.=ಶತಕತ್ರಯ
ಸ. ಸಾ.=ಸಮಯಸಾರ
ಸಾ. ಹಾ. ಕಾ. ಜೀ.=ಸಾಹಿತ್ಯ ಹಾಗು ಕಾವ್ಯಜೀವನ
ಸಂ.=ಸಂಧಿ

# ರತ್ನಾಕರ ಮಹಾಕವಿ

ಜೈನಸಾಹಿತ್ಯವೇ ಕನ್ನಡಸಾಹಿತ್ಯಕ್ಕೆ ಮುನ್ನುಡಿಯಾಗಿದ್ದರೂ, ಪಂಪ ಪೊನ್ನ ಹಾಗು ರನ್ನ ಇವರು ಕನ್ನಡ ಕವಿರತ್ನತ್ರಯರಾಗಿದ್ದರೂ ಕನ್ನಡ ಕಲ್ಪವೃಕ್ಷದ ಮೊದಲ ಬೀಡಿನ ಮಹಾಕೃತಿಗಳ ಚಂಪುವಿನ ಪೆಂಪಾಗಲೀ, ಕಂಪಾಗಲೀ ಜನಸಾಮಾನ್ಯರ ಪಾಲಿಗೆ ಇಂದಿಗೂ ಲಭಿಸಿಲ್ಲ. "ಪಂಡಿತ ಮಂಡಳಿಯಮುಂದೆ ಈ ರತ್ನತ್ರಯರ ಮಂದಹಾಸ! ವೈಯಾಕರಣಿಗಳ ಇದಿರು ಇವರ ವೈಯಾರ! ನಿಘಂಟುವಿನ ಪರ್ವತಾರೋಹಣದಲ್ಲಿ ಎಡವದೆ ನಡೆದವರಿಗೆ ಮಾತ್ರ ಇವರ ಸಾನ್ನಿಧ್ಯ!"[1]

ಜೈನಸಾಹಿತ್ಯ ಜನಸಾಮಾನ್ಯರ ಕಡೆ ತಿರುಗಿದುದು ಷಟ್ಪದಿಯಾಗಿ ಝೇಂಕರಿಸಿದಾಗ; ಪಾಮರರನ್ನು ಪಾವನಗೊಳಿಸಿದುದು ಸಾಂಗತ್ಯವಾಗಿ ಹರಿದಾಗ "ಸಾಂಗತ್ಯ ಇತರ ಛಂದಃ ಪ್ರಕಾರಗಳಿಗೆ ಹೋಲಿಸಿ ನೋಡಿದಾಗ ಈ ಮಟ್ಟು ಇಷ್ಟು ತಡವಾಗಿ ಆರಂಭಗೊಂಡಾಗ್ಯೂ ಬಹುಬೇಗ ಪ್ರಸಿದ್ಧವಾಯಿತು. ಕವಿಗಳಿಗೆ ಪ್ರಿಯವಾದ ಮಟ್ಟಾಯಿತು. ಸಾಂಗತ್ಯದ ಸೊಬಗಿನ ಸುಳಿವು ತಿಳಿಯುವುದೇ ತಡ, ಕೂಡಲೆ ಕವಿಗಳು ಆ ದಾಟಿಯಲ್ಲಿ ಹೇರಳವಾಗಿ ಕಾವ್ಯಗಳನ್ನು ಬರೆಯಲು ತೊಡಗಿದರು"[2]

ಜೈನಧರ್ಮವೆಂಬ ಗಂಡಭೇರುಂಡಕ್ಕೆ ವಿಚಾರ ಒಂದು ಮುಖವಾದರೆ ಆಚಾರ ಇನ್ನೊಂದು ಮುಖ; ವಿಚಾರಕ್ಕೆ

---

1 ಜಿ. ಬ್ರಹ್ಮಪ್ಪ, 'ಶೃಂಗಾರಕವಿ ರತ್ನಾಕರ' ಜಿ. ವಿ. ಜನವರಿ ೧೯೫೪.

2 ಶ್ರೀಹಂಪನಾ, 'ಸಾಂಗತ್ಯದ ಕೆಲವು ಸಂಗತಿಗಳು' ಪ್ರ. ಕ ೪೨-೧, ಪು ೧೨೯.

ಸ್ಯಾದ್ವಾದ ತಳಹದಿ; ಆಚಾರಕ್ಕೆ ಅಹಿಂಸೆಯೇ ಬುನಾದಿ. ಬರುಬರುತ್ತ ಜೈನ ದಿಗಂಬರ ಸಂಪ್ರದಾಯದಲ್ಲಿ ವಿಚಾರ ಭೂಮಿಕೆ ಹಿಂದುಳಿದು ಆಚಾರದಲ್ಲಿ ಕಂದಾಚಾರ ಕಲಬೆರಕೆಯಾಯಿತು. ಕಾಯಕ್ಲೇಶವೇ ಜೈನಧರ್ಮದ ಶ್ವಾಸಕೋಶವೆಂಬ ಭ್ರಾಂತಿ ಬಲಿಯಿತು! ಸಪ್ತಭಂಗಿ ಸುಪ್ತಾವಸ್ಥೆಗುರುಳಿ ಮಾರ್ದವವೂ ಹಾರ್ದಿಕವೂ ಆಗಿದ್ದ ಜೈನಧರ್ಮ ಶುಷ್ಕ ವೈರಾಗ್ಯದ ಆಡುಂಬೊಲವಾಗಿ ಜನಸಾಮಾನ್ಯರ ಬೆಂಬಲವನ್ನು ನೀಗಿಕೊಂಡಿತು. ನೀರಸವಾಗಿದ್ದ ಜ್ಞಾನಮಾರ್ಗಕ್ಕೆ ಭಕ್ತಿಯ ರಸಲೇಪನವೆಸಗಿ, ಕಾಯಕ್ಲೇಶಕ್ಕೆ ಹಂಸಕಲೆಯ ಒಪ್ಪವಿಟ್ಟು, ಮಾನವೀಯತೆಯೇ ಧರ್ಮದ ಮಾನದಂಡವೆಂಬುದನ್ನು ಮನಗಂಡು, ಜೈನಧರ್ಮವನ್ನು ಸುಧಾರಿಸಲು ರತ್ನಾಕರ ಮಹಾಯೋಗಿಯೇ ಬರಬೇಕಾಯಿತು!

ಹದಿನೈದು ಹದಿನಾರನೆಯ ಶತಮಾನದಲ್ಲೂ ಜೈನರಾಜಮನೆತನಗಳು ದಕ್ಷಿಣ ಕನ್ನಡಜಿಲ್ಲೆಯಲ್ಲಿ ಸುಭದ್ರವಾಗಿದ್ದವು. "ಮೂಡುಬಿದರೆ ಜೈನಧರ್ಮದ ಆಗರ; ಜಿನಾಲಯಗಳ ನೆಲೆವನೆ; ತ್ರಿಭುವನತಿಲಕ ಚೂಡಾಮಣಿಯಾದ ಸಾಸಿರಕಂಬದ ಬೃಹದ್ದೇಗುಲವಿರುವ ಅತಿಶಯಕ್ಷೇತ್ರ; ಎಲ್ಲಕ್ಕಿಂತ ಹೆಚ್ಚಾಗಿ ಜಿನವಾಣಿಯನ್ನು ತನ್ನ ಗರ್ಭದಲ್ಲಡಗಿಸಿಕೊಂಡಿರುವ ಧವಳ ಜೈಧವಳಗಳನ್ನು[3] ಸಂರಕ್ಷಿಸಿಕೊಂಡುಬಂದ ಮಹಾಕ್ಷೇತ್ರ ಈ

---

3 ಕ್ರಿ. ಶ. ಎರಡನೆ ಶತಮಾನದಲ್ಲಿ ಅಗ್ರಾಯಣೀಪೂರ್ವದ ಆಧಾರದ ಮೇಲೆ ಭೂತಬಲಿ ಮತ್ತು ಪುಷ್ಪದಂತರು ಷಟ್‌ಖಂಡಾಗಮವನ್ನು ರಚಿಸಿದರು. ಅದೇಕಾಲದಲ್ಲಿ 'ಜ್ಞಾನಪ್ರಭಾವ'ದ ಆಧಾರದಮೇಲೆ ಗುಣಧರ ಮುನಿಗಳು ಕಷಾಯಪ್ರಾಭೃತವನ್ನು ರಚಿಸಿದರು. ಕ್ರಿ. ಶ. ೯ ನೇ ಶತಮಾನದಲ್ಲಿ ನೃಪತುಂಗನ ಗುರುವಾದ ವೀರಸೇನರು ಷಟ್‌ಖಂಡಾಗಮದ ಮೇಲೆ ೭೨ ಸಾವಿರ ಶ್ಲೋಕಗಳಲ್ಲಿ ಧವಳಭಾಷ್ಯ ರಚಿಸಿ ಅನಂತರ

ಮೂಡುಬಿದರೆ! ಧವಳ ಜೈಧವಳಗಳಂತೆ ತೇಜೋಮೂರ್ತಿಗಳಾಗಿರುವ ನವರತ್ನದ ಜಿನಬಿಂಬಗಳನ್ನೂ ಸಂಗ್ರಹಿಸಿಕೊಂಡು ಮೂಡುಬಿದರೆ ರತ್ನಾಕರವಾಗಿ ರಾರಾಜಿಸುತ್ತಿದೆ! ಸಜೀವವಾದ ಕವಿಕೌಸ್ತುಭರತ್ನಕ್ಕೆ ಜನುಮವಿತ್ತು ಮೂಡಲಬಿದರೆ ಮೊದಲೇ ತನಗಿದ್ದ ಪೆಂಪಿಗೆ ಕಂಪನ್ನೆರೆದುಕೊಂಡಿತು!"[4] ಮೂಡುಬಿದರೆ ವೇಣೂರಿಗೂ ಕಾರ್ಕಳಕ್ಕೂ ನಡುವೆ ಇರುವ ಮಹಾಕ್ಷೇತ್ರ. ವೇಣೂರಿನಲ್ಲಿ ಒಂದು ಗೊಮ್ಮಟ ಮಹಾಮೂರ್ತಿ, ಕಾರ್ಕಳದಲ್ಲೊಂದು ಗೊಮ್ಮಟ ಮಹಾಮೂರ್ತಿ ವಿರಾಜಮಾನವಾಗಿವೆ. ಇವೆರಡೂ ಸ್ಥಾವರ ಜಿನಮೂರ್ತಿಗಳಾದರೆ ಇವೆರಡರ ನಟ್ಟನಡುವೆ ಮೂಡಿದ ಜಂಗಮ ಜಿನಮೂರ್ತಿ ಮಹಾಕವಿರತ್ನಾಕರ! "ಮಣಿ ಶೈಲಂ ಗತಿಯಿಂದು ಶಾಲಿಶಕಕಾಲಂ ಸಂಧಿರಲ್ಪಾತ್ತೆಳವಾಂಗಣದೊಳ್ ವೇಣುಪುರಾಂಕದೊಳ್ ಸೃಜಿಸಿದಂ ರತ್ನಾಕರಾರ್ಯಂ"[5] ಎಂದು ತ್ರಿಲೋಕಶತಕದಲ್ಲಿ ರತ್ನಾಕರನೇ ಕಾಲವನ್ನೂ ಕ್ಷೇತ್ರವನ್ನೂ ಸೂಚಿಸಿರುವನು. ಅದರಿಂದ ಮೂಡುಬಿದರೆಯಲ್ಲಿ (ಹಿಂದೆ ಇದನ್ನು ವೇಣುಪುರ ಎನ್ನುತ್ತಿದ್ದರು) ಕ್ರಿ. ಶ. ೧೫೫೭ ರಲ್ಲಿ ತ್ರಿಲೋಕಶತಕ ರಚಿತವಾದಂತಾಯಿತು. ಈತನ ಉಳಿದ

---

ಕಷಾಯ ಪ್ರಾಭೃತವನ್ನು ಕೈಗೆ ತೆಗೆದುಕೊಂಡು ಭಾಷ್ಯ ಬರೆಯಲು ಪ್ರಾರಂಭಿಸಿ ೨೦ ಸಾವಿರ ಶ್ಲೋಕ ಬರೆಯುವಹೊತ್ತಿಗೆ ಪರಂಧಾಮವನ್ನೈದಿದರು! ಅನಂತರ ಇವರ ಪಟ್ಟದ ಶಿಷ್ಯರಾದ ಜಿನಸೇನರು ಮತ್ತೆ ೪೦ ಸಹಸ್ರ ಶ್ಲೋಕಗಳನ್ನು ತುಂಬಿ ಜಯಧವಳವನ್ನು ಪೂರ್ಣಗೊಳಿಸಿದರು! ಧವಳ ಜಯಧವಳಗಳ ಏಕಮಾತ್ರಪ್ರತಿ ಮೂಡುಬಿದರೆಯಲ್ಲಿ ಜೋಪಾನವಾಗಿದೆ.

[4] ಜಿ. ಬ್ರಹ್ಮಪ್ಪ, 'ಕನ್ನಡಕವಿ ಪಂಚಪರಮೇಷ್ಠಿಗಳು' ವಿ. ಅ. ೧೯೫೮, ಸೆಪ್ಟಂಬರ್.

[5] ತ್ರಿ. ಶ. ೧೨೮.

ಕೃತಿಗಳಲ್ಲಿ ಯಾವುದರಲ್ಲೂ ಕಾಲವನ್ನು ಸೂಚಿಸಿಲ್ಲ. "ಕ್ಷತ್ರಿಯ ವಂಶಜನೆಂದು ಕರ್ಣಾಟ ಸುಕ್ಷೇತ್ರನೆಂದು ಅಣ್ಣಗಳೆಂದು ಧಾತ್ರಿ ನುಡಿವುದು"[6] "ಆಮಯ ಜನನ ಮರಣವುಳ್ಳ ಜನಕರ ನಾಮವ ಪೇಳ್ವರುರ್ವಿಯೊಳು. ಶ್ರೀ ಮಂದರಸ್ವಾಮಿ ಸನ್ನ್ಯಸ್ಯ ನೆಂದಾಸು ನೇಮಿಸಿ ಸುಖಪಡೆದಿಹೆನು"[7] "ದೇಶಿಗಣಾಗ್ರಣಿ ಚಾರುಕೀರ್ತ್ಯಾಚಾರ್ಯ ಶ್ರೀ ಶುಚಿದೀಕ್ಷೆಯಿತ್ತಾಗ ಆಶಾತಿದೂರ ಶ್ರೀ ಗುರುಹಂಸನಾಥ ಪ್ರಕಾಶದೊಳ್ನಿಲಿಸಿ ರಕ್ಷಿಸಿದಾ"[8] "ಸಿದ್ಧ ಪದಕೆ ಸೋತೆನಾಗಿ ರತ್ನಾಕರಸಿದ್ಧ ನೆಂದೆನಲೊಲ್ವೆ"[9] ಎಂದು ಭರತೇಶವೈಭವದಲ್ಲಿ ಸಂಕ್ಷಿಪ್ತವಾಗಿ ಹಾಗು ಸಂಕೇತಭಾಷೆಯಲ್ಲಿ ಇಷ್ಟುಮಾತ್ರ ತಿಳಿಸಿರುವನು. ತನಗೆ ಜನುಮವಿತ್ತ ಮಾತಾಪಿತ ರನ್ನೂ ನೆನೆಯದಷ್ಟು ರತ್ನಾಕರ ನಿಶ್ಚಯ ಸಮ್ಯಗ್ದೃಷ್ಟಿಯಾಗಿ ದುವನಲ್ಲ! "ನೀನಾನೆಂಬರಿವಾಗೆ ಸಾಕು ... ನಿನ್ನೆನ್ನ ಸಂಧಾನಂ ನಿತ್ಯಸುಖೈಕ ವಿನ್ನುಳಿದುವೇಂ ರತ್ನಾಕರಾಧೀಶ್ವರಾ"[10] ಎಂದು ಉದ್ಗಾರವೆತ್ತಿರುವ ರತ್ನಾಕರ ಕವಿಗೆ ಸಂಶೋಧಕರ ಕುತೂಹಲ ಕಾರಿಯಾದ ಬೊಬ್ಬೆ ಕೇಳೀತೆ?

ಕ್ರಿ.ಶ. ೧೭೭೦–೧೮೪೧ ರ ನಡುವೆ ಬಾಳಿದ ದೇವಚಂದ್ರ ತನ್ನ ರಾಜಾವಳೀ ಕಥೆಯಲ್ಲಿ ರತ್ನಾಕರನ ಬಾಳ್ವೆಯನ್ನು ರೋಮಾಂಚನ ಕಾರಿಯಾಗಿ ಚಿತ್ರಿಸಿರುವನು. ಸೂರ್ಯವಂಶದ ಅರಸುಮನೆತನಕ್ಕೆ ಸೇರಿದ ಮೂಡುಬಿದರೆಯ ದೇವರಾಜನ ಮಗನೇ ರತ್ನಾಕರ. ಜೈನಸಾಹಿತ್ಯದಲ್ಲೂ ಸಿದ್ಧಾಂತದಲ್ಲೂ ಪಾರಂಗತನಾದ ರತ್ನಾಕರ ಕಾರ್ಕಳದ ಭೈರಸವೊಡೆಯರ ಆಸ್ಥಾನದಲ್ಲಿ ಆಶ್ರಯವನ್ನು ಪಡೆದನು. ಅಲ್ಲಿ ಶೃಂಗಾರಕವಿಯೆಂದು ಹೆಸರು ಗಳಿಸಿದನು. ಭೈರಸಪುತ್ರಿ ತನ್ನ ಕನ್ನೆತನವನ್ನು ಈ ಶೃಂಗಾರಕವಿಗೆ ಕಾಣಿಕೆ

6 7, 8, 9, ಭ, ವೈ, ಸಂ, ೮೦ ; 10 ರ, ಶ, ೧೨೪ ;

ಯಾಗರ್ಪಿಸಿದಳಂತೆ! ಇವರ ಪ್ರಣಯ ರಹಸ್ಯ ರಟ್ಟಾಗಿ ರತ್ನಾಕರ ತಲೆಯುಳಿಸಿಕೊಳ್ಳಲೋಸುಗ ತಲೆಮರೆಸಿಕೊಳ್ಳಬೇಕಾಯಿತು. ಹುಂಚಕ್ಕೆ[11] ಧಾವಿಸಿ ಮಹೇಂದ್ರಕೀರ್ತಿಗಳ ಕಾಲಿಗೆ ಬಿದ್ದು ಅಣುವ್ರತ ಧಾರಿಯಾದನು. ವಿಜಯಣ್ಣನ ದ್ವಾದಶಾನುಪ್ರೇಕ್ಷೆಯನ್ನು ಮೀರಿಸಲು ರತ್ನಾಕರ ಭರತೇಶವೈಭವವನ್ನು ರಚಿಸಿದನು. ಆಗಮ ವಿರುದ್ಧವಾದ ಕೆಲವು ಸಂಗತಿಗಳು ಇದರಲ್ಲಿವೆಯೆಂದು ರತ್ನಾಕರನಿಗೆ ಆಗದವರು ಬೊಬ್ಬೆಹಾಕಿ ಇವನನ್ನು ಪೇಚಿಗೆ ಸಿಕ್ಕಿಸಲು ಯತ್ನಿಸಿದಾಗ ರತ್ನಾಕರ ರೋಸಿ, ಆತ್ಮಜ್ಞಾನಿಗೆ ಯಾವ ಮತವಾದರೇನಂತೆ ಎಂದುಕೊಂಡು ವೀರಶೈವನಾದನು.

ವರಸಮ್ಯಕ್ತ್ವ ಸುಧರ್ಮ ಜೈನಮತದೊಳ್ತಾಂ
ಪುಟ್ಟಿಯಾದೀಕ್ಷೆಯಂ |
ಧರಿಸೀ ಸನ್ನುತ ಕಾವ್ಯಶಾಸ್ತ್ರಂಗಳುಮಂ ನಿರ್ಮಾಣಮಂ
ಮಾಡುತಂ ||
ವರರತ್ನಾಕರ ಯೋಗಿಯೆಂದು ನಿರುತಂ ವೈರಾಗ್ಯಂ
ಬಂದೇರಲಾಂ |
ಹರದೀಕ್ಷಾವ್ರತನಾದೆನ್ನೈ ಹರಹರಾ
ಶ್ರೀ ಚನ್ನಸೋಮೇಶ್ವರಾ || [12]

ಎಂಬ ಶ್ಲೋಕ ಸೋಮೇಶ್ವರಶತಕದ ಕೆಲವು ಓಲೆಪ್ರತಿಗಳಲ್ಲಿದ್ದು ಸಂಶೋಧಕರ ಗಮನ ಸೆಳೆಯುತ್ತಿದೆ. ಮನಸ್ಸು ತಿಳಿಗೊಂಡ ಮೇಲೆ ರತ್ನಾಕರ ಮತ್ತೆ ಹಳೆಯ ಗಂಡನ ಪಾದವೇ ಗತಿಯೆಂದು

---

[11] ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೋಕು ಹುಂಚದಲ್ಲಿರುವ ಜೈನಮತದ ಪೀಠಾಧಿಕಾರಿಗಳನ್ನು ಇಂದಿಗೂ ದೇವೇಂದ್ರ ಕೀರ್ತಿಯೆಂದೇ ಕರೆಯುವರು.

[12] ಶ್ರೀ. ಎ. ಶಾಂತರಾಜಶಾಸ್ತ್ರಿಗಳು, ಶ. ತ್ರ. ಮು IV

ಕೊಂಡು ಜೈನನಾಗಿ ಕಠಿಣ ವ್ರತಗಳನ್ನು ಪಾಲಿಸುತ್ತ ಶತಕತ್ರಯ ಗಳನ್ನೂ ಅಧ್ಯಾತ್ಮ ಗೀತಗಳನ್ನೂ ರಚಿಸಿದನೆಂದು ರಾಜಾವಳೀ ಕಥೆಯಲ್ಲಿ ಹೇಳಿದೆ. ಆದರೆ ಇದುವರೆವಿಗೂ ರತ್ನಾಕರನ ಪ್ರಣಯ ಪ್ರಪಂಚವನ್ನಾಗಲಿ ಮತಾಂತರಗಳನ್ನಾಗಲಿ ಕುರಿತು ನಮ್ಮಲ್ಲಿ ಸಂಶೋಧನೆ ನಡೆದಿಲ್ಲ. ಈ ಮಹಾಘಟನೆಗಳ ಸತ್ಯಾಸತ್ಯವನ್ನು ಬಯಲಿಗೆಳೆದುದೇ ಆದರೆ ರತ್ನಾಕರನ ಬಾಳ್ವೆಯಮೇಲೆ ಪ್ರಕಾಶ ಬೀಳದಿರದು. "ಅದುಕಾರಣ ರತ್ನಾಕರನು ತನಗೆ ಶೃಂಗಾರ ಕವಿಯೆಂದು ಬಿರುದಿತ್ತ ಆ ಇಮ್ಮಡಿ ವೀರಭೈರರಸನ ಆಳಿಕೆಯಲ್ಲಿ (ಕ್ರಿ. ಶ. ಸು. ೧೪೯೦-೧೫೩೫) ಕ್ರಿ. ಶ. ಸು ೧೫೩೦-೩೫ ರೊಳಗೆ ಭರತೇಶವೈಭವವನ್ನು ರಚಿಸಿದನೆಂದು ನಿರ್ಣಯಿಸಬಹುದು. ಹಾಗಾದರೆ ರತ್ನಾಕರಸಿದ್ಧನು ೧೫೦೦ ರ ನೆರೆಯಲ್ಲಿ ಜನಿಸಿ ಸು. ೧೫೩೦-೩೫ ರೊಳಗೆ ಭರತೇಶವೈಭವವನ್ನೂ, ಸು ೧೫೫೦-೬೦ ರೊಳಗೆ ಆ ಮೂರು ಶತಕಗಳನ್ನೂ ಬರೆದು ಸು ೧೫೭೦-೭೦ ರೊಳಗೆ ಕಾಲವಾಗಿರಬಹುದು"[13] ಸಂಶೋಧಕನಲ್ಲದ ಹಾಗೂ ಕೇವಲ ದಂತಕಥೆಗಳ ಸಂಗ್ರಹಕಾರನಾದ ದೇವಚಂದ್ರನು ತ್ರಿಲೋಕಶತಕವನ್ನು ಶತಕತ್ರಯದಲ್ಲಿ ಕೊನೆಯದಾಗಿ ಹೇಳಿರು ವುದನ್ನು ಮಾನ್ಯ ರಾಷ್ಟ್ರಕವಿ ಗೋವಿಂದಪೈಗಳು ಪೂರ್ವ ಭಾವಿ ಯಾಗಿ ಸಂಪೂರ್ಣವಾಗಿ ಒಪ್ಪಿಕೊಂಡು ರತ್ನಾಕರಸಿದ್ಧನ ಕಾಲ ವನ್ನು ನಿರ್ಣಯಿಸಲು ಪ್ರಯತ್ನಿಸಿರುವರು. "ರತ್ನಾಕರನ ಕೃತಿ ಗಳಲ್ಲಿ ಕಾಣುವ ಪ್ರತಿಭಾ ಗಂಗಾಪ್ರವಾಹವನ್ನಾಗಲಿ, ಇಲ್ಲವೆ ಅವನ ಕೃತಿಗಳಲ್ಲಿ ಎದ್ದುಕಾಣುವ ಸಾಂಸ್ಕೃತಿಕ ಹಾಗು ಕಲಾತ್ಮಕ ವಿಕಾಸವನ್ನಾಗಲಿ ಗಮನಿಸಿ ಈ ಮಹನೀಯರು

---

13 ಶ್ರೀ ರಾಷ್ಟ್ರಕವಿ ಗೋವಿಂದಪೈಗಳು 'ರತ್ನಾಕರಸಿದ್ಧನ ಕಾಲ ನಿರ್ಣಯ' ವಿ. ಅ, ಸಂ. ೧೯. ಕಿ. ೧೧. ಪು ೩೩೫.

ಸಂಶೋಧನೆಯನ್ನು ನಡೆಸಿಲ್ಲವೆಂದೇ ಹೇಳಬೇಕು. ರತ್ನಾಕರನ ಮಾನಸಿಕ ಹಾಗೂ ಆಧ್ಯಾತ್ಮಿಕ ಬೆಳವಣಿಗೆಯನ್ನು ಅವನ ಕೃತಿಗಳಲ್ಲಿ ಇಂದಿಗೂ ನಾವು ಗುರುತಿಸಬಹುದು. ಈ ದಿಶೆಯಲ್ಲಿ ನಾವು ಪರಿಶೋಧನೆ ನಡೆಸಿದ್ದೇ ಆದರೆ ತ್ರಿಲೋಕಶತಕ ರತ್ನಾಕರನ ಚೊಚ್ಚಲ ಕೃತಿಯಾಗದಿರದು[14]"

ತೆರಪಾದ ಶಾಸ್ತ್ರದೊಳು | ನ್ನರುಪಿದ ಲೋಕಸ್ವರೂಪಮಂ ನಾನೀಗಳ್॥
ಕಿರಿದರೊಳೆ ಸೂಚಿಸುವೆನದ | ನರಿಯಲ್ಬೇಕೆಂದು ಮಂದಮತಿಗಳಲ್ಪ
ಬಲರ್ ॥15

ಮೂಢರಿಗಾಗಿ (ಮಂದಮತಿಗಳಿಗಾಗಿ) ರತ್ನಾಕರಾರ್ಯ ಇದನ್ನು ಬರೆದಿರುವನಂತೆ ವಾಚಕವೃಂದವನ್ನು ಮಂದಮತಿಗಳೆಂದು ಕರೆದಿರುವುದನ್ನು ನೋಡಿದರೆ ರತ್ನಾಕರಲೋಕಾನುಭವವನ್ನು ಪಡೆಯುವುದಕ್ಕೆ ಮೊದಲೇ ಅಂದರೆ ಪದವೀಧರಾವಸ್ಥೆಯ (Graduation) ಹೊಸದರಲ್ಲೇ ಈ ಕೃತಿಯನ್ನು ರಚಿಸಿದಂತೆ ಕಾಣುವುದು. ಉಳಿದ ಕೃತಿಗಳಲ್ಲಿ ಈ ಕವಿ ಅಪ್ಪಿತಪ್ಪಿಯಾದರೂ ವಾಚಕವೃಂದವನ್ನು ಅನಾವಶ್ಯಕವಾಗಿ ಮಂದಮತಿಗಳೆಂದು ಒಗರುತುಂಬಿದ ನುಡಿಯಿಂದ ಎಲ್ಲೂ ಕರೆದಿಲ್ಲ.

ಕೇಳಿರೊ ಭವ್ಯರು ನಿಮಗೊಂದು ಸುಕಥೆಯ | ಹೇಳುವೆನತಿ
ಮೃದುವಾಗಿ ||
ಕೇಳಿದಿರಾದರೆ ನಿಮಗಾತ್ಮ ಸುಖವಿಂದು | ನಾಳೆನಾಡಿದ
ನೊಳಗಹುದು || 16

---

14 ಜಿ. ಬ್ರಹ್ಮಪ್ಪ ರ ಶ. ಸಾ. ಪು 251.

15 ತ್ರಿ. ಶ. ೨.

16 ಭ. ವೈ. ಸಂ. ೧, ಪ. ೧೧;

" ಭರತೇಶವೈಭವವನ್ನು ಬರೆಯುವಾಗ ರತ್ನಾಕರನ ಹೃದಯ ಹದಗೊಂಡಿತ್ತು. ಆತನ ಕಣ್ಣಿಗೆ ಶ್ರಾವಕನೃಂದ ಭವ್ಯಾತ್ಮರಾಗಿ ಕಂಡುಬಂದರು. ಆದರೆ ತ್ರಿಲೋಕ ಶತಕವನ್ನು ತಾವು ತೆರೆಯು ತ್ತಿದ್ದಂತೆ ಮಂದಮತಿಗಳಾಗಬೇಕಾಗುವುದಲ್ಲ! ಭರತೇಶ ವೈಭವ ವನ್ನು ಮುಟ್ಟುತ್ತಿದ್ದಂತೆ ಭವ್ಯರಾಗುವೆವು! ನಾಲಗೆ ಕುಲವನ್ನೂ ಹೇಳಬಲ್ಲದು ಅಂತೆ ವಯಸ್ಸನ್ನೂ ಹೇಳಬಲ್ಲದು " [17] ರತ್ನಾಕರನ ತ್ರಿಲೋಕಶತಕ ಆತನ ಕೃತಿಗಳಲ್ಲಿಲ್ಲ ನೀರಸವಾದುದು. ಸಿದ್ಧಾಂತ ವನ್ನು ವಿವರಿಸುವಾಗ ನೀರಸವಾಗುವುದು ಅನಿವಾರ್ಯವೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಡಬಹುದು. ಈ ಮಾತು ಭರತೇಶ ವೈಭವದ ರತ್ನಾಕರಸಿದ್ಧನಿಗೆ ಸುತರಾಂ ಅನ್ವಯಿಸುವುದಿಲ್ಲ ರತ್ನಾಕರಸಿದ್ಧ ಏನು ಹೇಳಿದರೂ ಕಾವ್ಯಮಯವಾಗೇ ಹೇಳು ವನು. ಮೂಗರು ಕಂಡ ಕನಸಿನಂಥ ಹಂಸತತ್ವವನ್ನೂ ರತ್ನಾ ಕರ ಹಂಸಕಲೆಯಾಗಿ ನಿರೂಪಿಸಿ ಭರತೇಶ ವೈಭವದ ಸಡಗರದಲ್ಲಿ ಸಂಭ್ರಮವನ್ನು ತುಂಬಿರುವನಲ್ಲ! ಇಂಥ ರತ್ನಾಕರ ತ್ರಿಲೋಕ ಶತಕದಲ್ಲೇಕೆ ಮಂಕಾಗಿ ಹೋಗಿರುವನು? ತ್ರಿಲೋಕಸ್ವರೂಪ ರಸವಸ್ತುವಾಗಲಾರದೆ? "ತ್ರಿಲೋಕಶತಕ ರತ್ನಾಕರಾರ್ಯ ಸಿದ್ಧ ವಾಗುವತನಕ ಕಾಯಲಾರದೆ ಅವಸರಪಟ್ಟು ಆತನ ಗಮನವನ್ನು ಸೆಳೆದುದರಿಂದ ಇಷ್ಟೊಂದು ನೀರಸವಾಗಬೇಕಾಯಿತು. ಇಲ್ಲದಿದ್ದರೆ ತ್ರಿಲೋಕಶತಕವೂ ಒಂದು ಅಪೂರ್ವ ಕೃತಿಯಾಗುತ್ತಿತ್ತೋ ಏನೊ! ಅಂತು ರತ್ನಾಕರನ ಪ್ರತಿಭಾನೇತ್ರ ಅರಳುವುದಕ್ಕೆ ಮೊದಲೇ, ಹಾಗು ಆತನ ಕಲ್ಪನಾಪಕ್ಷ ಬಲಿಯುವುದಕ್ಕೆ ಮುನ್ನವೇ ಈ ತ್ರಿಲೋಕಶತಕ ಜನ್ಮ ತಾಳಿತು.

---

17 ರ. ಶ. ಸಾ. ಪು 247.

## ರತ್ನಾಕರನ ಕವಿತಾ ಕಲ್ಪವೃಕ್ಷದ ಮೊದಲ ಬೀಡಿನ ಹೀಚುಗಾಯಿ ಈ ತ್ರಿಲೋಕಶತಕ![18]

ತ್ರಿಲೋಕ ಶತಕವನ್ನು ರತ್ನಾಕರ ಕ್ರಿ. ಶ. ೧೫೫೭ರಲ್ಲಿ ರಚಿಸಿರುವನು. ಈ ವೇಳೆಗೆ ಇವನು ಇಪ್ಪತ್ತೈದರ ಯುವಕನಾಗಿರಬೇಕು. ತನ್ನ ಮುವತ್ತೈದರಲ್ಲೋ ಅಥವಾ ಅದನ್ನು ದಾಟಿದ ನಂತರವೂ ಇವನು ಭರತೇಶವೈಭವವನ್ನು ರಚಿಸಿರಬಹುದು. ಆನಂತರ ಇವನಿಗೆ ಜೈನಮತದಿಂದ ಉಚ್ಚಾಟನೆಯಾಗಿ ವೀರಶೈವನಾಗಿರಬೇಕು. ಒಂದೆರಡು ವರ್ಷ ಅಲ್ಲಿದ್ದು ಮತ್ತೆ ಜಿನಧರ್ಮಕ್ಕೆ ಬಂದು ಮನಸ್ಸಿನ ಅಂದೋಳನ ನಿಲ್ಲುವತನಕ ತಪವೆಸಗಿ ಅನಂತರ ರತ್ನಾಕರಶತಕವನ್ನೂ ಆಮೇಲೆ ಅಪರಾಜಿತ ಶತಕವನ್ನೂ ಬರೆದಂತೆ ಕಾಣುವುದು. ಕ್ರಿ. ಶ. ೧೫೩೨ರಲ್ಲಿ ಜನಿಸಿ ೧೬ನೇ ಶತಮಾನದ ಅಂತ್ಯದವರೆಗೂ ಬಾಳಿ ಹದಿನೇಳನೇ ಶತಮಾನದ ಉದ್ಘಾಟನೆಯೆಸಗಿ ರತ್ನಾಕರ ಪರಂಧಾಮವನ್ನೈದಿರಬಹುದು.

### ರತ್ನಾಕರನ ಜಾತಕದ ರೂಪರೇಷೆ[19]

ರತ್ನಾಕರನ ಜನನ. ಸು. ೧೫೩೨
ತ್ರಿಲೋಕಶತಕದ ರಚನೆ. ೧೫೫೭
ಭರತೇಶವೈಭವರಚನೆ ಸು ೧೫೬೭
ರತ್ನಾಕರ ವೀರಶೈವನಾದುದು ಸು. ೧೫೭೨
,, ಮತ್ತೆ ಜೈನನಾದುದು ಸು. ೧೫೭೫
ರತ್ನಾಕರ ಶತಕದ ರಚನೆ ಸು. ೧೫೭೭

18 ರ. ಶ. ಸಾ. ಪು. 250.

19 ಈ ಬಗ್ಗೆ ಸಕಾರಣವಾದ ವಿವೇಚೇಕಾದರೆ ನನ್ನ ಗ್ರಂಥವಾದ ರತ್ನಾಕರನ ಶತಕಸಾಹಿತ್ಯದಲ್ಲಿ 247-261 ಪುಟ ನೋಡುವುದು.

ಅಪರಾಜಿತಶತಕದ ರಚನೆ ಸು. ೧೫೮೨
ಅಧ್ಯಾತ್ಮಗೀತದ ರಚನೆ ಸು. ೧೫೮೭
ರತ್ನಾಕರನ ಮರಣ ಕ್ರಿ. ಶ. ೧೬೦೦ ರ ನಂತರ

ರತ್ನಾಕರನ ಕೃತಿಗಳಲ್ಲೇ ಎದ್ದು ಕಾಣುವ ಆತನ ಆಧ್ಯಾತ್ಮಿಕ ಹಾಗು ಮಾನಸಿಕ ವಿಕಾಸವನ್ನೂ, ಪ್ರತಿಭಾಸಂಪದದ ಉಜ್ವಲತೆಯನ್ನೂ, ಕಲ್ಪನೆಯ ಕಮನೀಯತೆಯನ್ನೂ ಎಲ್ಲಕ್ಕಿಂತ ಹೆಚ್ಚಾಗಿ ಆತನ ಅಪೂರ್ವ ದರ್ಶನವನ್ನೂ ಗಮನಿಸಿ ಊಹೆಯ ಬುನಾದಿಯ ಮೇಲೆ ವಿಶ್ವಕವಿಯ ಜಾತಕದ ರೂಪರೇಖೆಯನ್ನು ಬಿಡಿಸಲು ಪ್ರಯತ್ನಿಸಿರುವೆನು.

ಭರತಬಾಹುಬಲಿಗಳ ಪ್ರಸಂಗ ಜಿನಸೇನರ ಪೂರ್ವಪುರಾಣದಲ್ಲೂ ಪಂಪನ ಆದಿಪುರಾಣದಲ್ಲೂ ಪ್ರಾಸಂಗಿಕವಾಗಿ ಬಂದಿದೆ. ಆದಿದೇವನ ಚರಿತೆಯೇ ಮೇಲಿನ ಇಬ್ಬರು ಕವಿಗಳ ಮುಖ್ಯಗುರಿ. ಭರತೇಶನ ಭೋಗವನ್ನಾಗಲಿ, ಯೋಗವನ್ನಾಗಲಿ ಮೇಲಿನ ಪುರಾಣಕವಿಗಳು ಎಷ್ಟು ವಿವರಿಸಬಹುದಾಗಿತ್ತೋ ಅಷ್ಟನ್ನು ವಿವರಿಸಿಲ್ಲ. ಕೇವಲ ಚಕ್ರೇಶನ ಮಹತ್ವಾಕಾಂಕ್ಷೆಯನ್ನೂ, ಪ್ರತಿಷ್ಠೆಯನ್ನೂ ಮಿಗಿಲಾಗಿ ದಯಾದಾಕ್ಷಿಣ್ಯರಹಿತವಾದ ಆತನ ಸಮರೋತ್ಸಾಹವನ್ನೂ ಅವರು ಕಣ್ಣಿಗೆ ಕಟ್ಟುವಂತೆ ಬಣ್ಣಿಸಿರುವರು. ಭರತೇಶನ ಪರಿಪೂರ್ಣವಾದ ಬಾಳ್ವೆಯನ್ನು ರತ್ನಾಕರ ಚಿತ್ರಿಸಿರುವನು. ಭರತೇಶನ ಬಾಹ್ಯಾಭ್ಯಂತರ ಜೀವನ ರಹಸ್ಯವನ್ನು ವಿವರಿಸುತ್ತ ಆತನ ಅನಂತಭೋಗಸಾಗರದಲ್ಲಿ ಭೇದವಿಜ್ಞಾನದ ತರಂಗ ಮಾಲೆಯನ್ನೂ ಸಿಂಗರಿಸಿರುವನು. ಚಕ್ರೇಶನ ಸಾಹಸದಲ್ಲಿ ಸ್ನೇಹವನ್ನೂ ಸಮರಸಗೊಳಿಸಿ ಮಾನವೀಯತೆಯ ಮೆರುಗಿತ್ತು ರತ್ನಾಕರ ಭರತೇಶವೈಭವವನ್ನು ವಿರಚಿಸಿರುವನು. ಈ ಬೃಹತ್‌ಕೃತಿಯನ್ನು ಪಂಚವಿಜಯಗಳಾಗಿ ವಿಂಗಡಿಸಿಕೊಂಡು

ಸು. ಹತ್ತುಸಾವಿರ ಪದ್ಯರಾಶಿಯನ್ನು ಪೇರಿಸಿ, ಮೂಡುಬಿದರೆಯ ಸಹಸ್ರಕಂಬದ 'ತ್ರಿಭುವನಚೂಡಾಮಣಿತಿಲಕಜಿನಾಲಯ'ಕ್ಕೆ ಮಹತ್ತು ಬೃಹತ್ತುಗಳಲ್ಲಿ ಹೊಯ್ ಕೈಯ್ಯಾಗುವಂತೆಯೂ ಸೌಂದರ್ಯದಲ್ಲಿ ಅದಕ್ಕೆ ಎಷ್ಟೋ ಮಡಿ ಮಿಗಿಲಾಗುವಂತೆಯೂ ಈ ಕವಿತಾದೇಗುಲವನ್ನು ರತ್ನಾಕರಮಹಾಕವಿ ನಿರ್ಮಿಸಿರುವನು.

ಭರತೇಶನ ಮೂರೇಮೂರು ದಿನದ ರಾಗರಸಿಕತೆ ಹಾಗು ವೀತರಾಗರಸಿಕತೆಗಳಿಂದ ರಂಜನೆ ಪಡೆದ ನಾನಾ ಘಟನೆಗಳು, ಸಂಜೆಗತ್ತಲಿನಲ್ಲಿ ಚಂದಿರನ ಪ್ರಕಾಶದಲ್ಲಿ ರಂಜಿಸುವ ತಾರಾಗಣ ದಂತೆ ಭೋಗವಿಜಯದ ಮೂಲೆಮೂಲೆಯಲ್ಲೂ ಕಿಕ್ಕಿರಿದು ಹೋಗಿವೆ. ಕವಿಗಳು, ಗಮಕಿಗಳು, ಗಾಯಕರು ಭರತೇಶನನ್ನು ಸುತ್ತುಗಟ್ಟಿ ಕಮನೀಯಕಲೆಯ ಕನಕಜಾಲವನ್ನು ಒಬ್ಬರಾದ ಮೇಲೊಬ್ಬರಂತೆ ಬೀಸುವರು; ಈ ನಡುವೆ ಸುಮಾರು ಹತ್ತಿರ ಹತ್ತಿರ ಒಂದುಲಕ್ಷ ಮಂದಿ ಲೋಲಾಕ್ಷಿಯರು ತಂಡತಂಡವಾಗಿ ಬಂದು ತಮ್ಮ ಗಂಡನಸುತ್ತ ಶೃಂಗಾರದ ಕೋಟೆಯನ್ನೇ ಕಟ್ಟಿ ಬಿಡುವರು. ತಮ್ಮನ್ನು ಅಲಕ್ಷ್ಯಮಾಡಿದನಲ್ಲ ಎಂದು ಒಬ್ಬಿಬ್ಬರು ನಚ್ಚಿನ ನಲ್ಲೆಯರು ಮುನಿಸನ್ನು ತೋರುತ್ತ ದುಮುಗುಟ್ಟುವರು; ಈ ಸಡಗರ ಹಾಗು ಸಂಭ್ರಮದ ನಟ್ಟನಡುವೆ ರಸಯೋಗಿಯಂತೆ ಸಾಕ್ಷೀಭೂತನಾಗಿ ಓಲಾಡಿದ ಭರತೇಶ ಮರುಕ್ಷಣದಲ್ಲೇ ಸತ್ಪಾತ್ರವನ್ನರಸಿ ಆಹಾರದಾನವಿತ್ತು ಜೊತೆಗೆ ಯಾವ ಮಾಯ ದಲ್ಲೋ ಚಣಕಾಲ ಅಂತರ್ಮುಖಿಯಾಗಿ, ತನಗಾಗಿ ಬಹುಕಾಲ ದಿಂದ ಕಾಯುತ್ತ ನಿಂತ ಕೈವಲ್ಯಲಕ್ಷ್ಮಿಯನ್ನು ಸಂತೈಸುವನು! "ಭೋಗವಿಜಯ ಒಂದು ಶೃಂಗಾರಮಹಾಸಾಗರ. ಅಲ್ಲಿ ಬರುವ ಚಿತ್ರಗಳಲ್ಲಿ ಒಂದೊಂದೂ ಸರಸಸಲ್ಲಾಪದ ಕಲ್ಲೋಲಮಾಲೆ. ಇದರಮೇಲೆ ತೇಲಿಹೋಗುತ್ತಿರುವ ಓದುಗರು ಲಾವಣ್ಯ ರಸಾನು

ಭೋತಿಯ ಚೆಲುವು ಸೀಮೆಯನ್ನು ಸಂದರ್ಶಿಸಿ ಧನ್ಯರಾಗುತ್ತಾರೆ." [20]

ಕವಿತೆ, ಗಾನ, ನರ್ತನ ಹಾಗು ಸರಸಸಲ್ಲಾಪ ಇವೆಲ್ಲ ಭೋಗ ವಿಜಯದಲ್ಲಿ ರತ್ನಾಕರನ ಕಮನೀಯ ಕಲ್ಪನಾಕಿರಣ ರಾಜಿಯನ್ನು ತೊಟ್ಟು ರಾರಾಜಿಸುತ್ತಿವೆ! ಈ ಮನಮೋಹಕ ಚಿತ್ರಗಳಿಗೆಲ್ಲ ಭೇದವಿಜ್ಞಾನದ ಬಣ್ಣವಿಟ್ಟು ಹಂಸಕಲೆಯ ಅಂಚು ಕಟ್ಟಿರುವುದರಿಂದ ಇವು ಮಹಿಮಾನ್ವಿತವಾಗಿ ರೂಪಗೊಂಡಿವೆ!

ದಿಗ್ವಿಜಯದಲ್ಲಿ ರಣ ಕೋಲಾಹಲವನ್ನು ಬಣ್ಣಿಸುವುದಕ್ಕಿಂತ ಮಿಗಿಲಾಗಿ ರತ್ನಾಕರ ಹೃದಯಂಗಮವಾದ ಮಕ್ಕಳಾಟವನ್ನು ತಂದು ತೊದಲ್ನುಡಿಯ ತುರಾಯನ್ನು ಇಳಿಬಿಟ್ಟು ಬಾಲಲೀಲೆಗೆ ಬಣ್ಣಕಟ್ಟಿ, ಅಲ್ಲಲ್ಲೇ ವಿವಾಹ ವೇದಿಕೆಗಳನ್ನು ಹರವಿ ಮಂಗಳ ಸೂತ್ರಗಳ ರಂಗನ್ನು ಚೆಲ್ಲಿ, ರೌದ್ರವೂ ಭಯಾನಕವೂ ಆದ ರಣ ಭೈರವನ ತಾಂಡವದ ಭೀಕರತೆಯನ್ನು ಬಹುಮಟ್ಟಿಗೆ ತಗ್ಗಿಸಿರುವನು. ಭರತೇಶ ಹೆಜ್ಜೆಯಿಟ್ಟ ತಾಣದಲ್ಲೆಲ್ಲ ಜಯನಘುವಿನ ಸಂತಸದ ನೂಪುರಧ್ವನಿ ಕೇಳೇವು. ಲೀಲಾಜಾಲವಾಗಿ ವಜ್ರ ಕವಾಟಗಳನ್ನು ಪುಡಿಗುಟ್ಟಿ, ತಮಿಸ್ರ ಗುಹೆಗಳ ಕಾರ್ಗತ್ತಲನ್ನು ಕಾಕಿಣೀರತ್ನದ ಪ್ರಭೆಯಲ್ಲಿ ಗುಡಿಸಿ ಹಾಕಿ, ವಿರಸಪ್ರಸಂಗಗಳನ್ನೆಲ್ಲ ಈ ಹದಿನಾರನೇ ಮನು ಮಾಸವೀಯತೆಯಲ್ಲಿ ಅಷ್ಟದಿಶೆಗೆದು ಚಣಮಾತ್ರದಲ್ಲಿ ಸರಸವಾಗಿಸಿ, ವೃಷಭಾದ್ರಿಯಲ್ಲಿ ಅಂಕಮಾಲೆಯನ್ನು ಕೊರೆಸಿ ಅದಕ್ಕೆ ಹಂಸಕಲೆಯ ಒಪ್ಪವಿಡಿಸಿ ವಿಜೃಂಭಿಸುವನು! ಎಲ್ಲವೂ ಮುಗಿದ ಮೇಲೆ ತೀರ್ಥೇಶನನ್ನು ಕಣ್ತುಂಬ ನೋಡಿಬರುವನು. ಅನಂತರ ತನ್ನ ಅಬ್ಬೆಯ ಆಶೀರ್ವಾದ ಪಡೆದುಕೊಂಡು ಭರತೇಶ ದಿಗ್ವಿಜಯಕ್ಕೆ ಮುಕ್ತಾಯ ಮಾಡಬೇಕೆಂದಿರುವಾಗ ಬಾಹುಬಲಿಯ ಅವಿನಯಪ್ರಸಂಗವನ್ನು

---

20 ಶ್ರೀ ತ. ಸು. ಶಾಮರಾಯರು, ಭ. ವೈ. ಸಂ, ಪೀ. 47.

ಎದುರಿಸಬೇಕಾಯಿತು. ಇದನ್ನು ರತ್ನಾಕರ ಆರುಸಂಧಿಗಳಲ್ಲಿ ಅಗಲ ಪದ್ಯಗಳಲ್ಲಿ ಬಿತ್ತರಿಸಿ, ಸ್ನೇಹಸೌಹಾರ್ದತೆಯ ತೆರೆಯೆದ್ದು ಮೊರೆವ ಭರತೇಶನ ವಾತ್ಸಲ್ಯಸಾಗರದಿದಿರು ಕಾಮದೇವನ ಕಡು ಗೋಪ ಕರಗಿ ಕೊನೆಗೆ ನಿರ್ವೇಗವಾಗಿ ಆತ (ಬಾಹುಬಲಿ) ಸನ್ಯಾಸಿಯಾದನೆಂದು ನಿರೂಪಿಸಿರುವನು. ಅಣ್ಣತಮ್ಮಂದಿರ ಧರ್ಮಯುದ್ಧವಾಗಲಿ, ಭರತೇಶನ ಮಹತ್ವಾಕಾಂಕ್ಷೆಯ ಸತ್ವವಾದ ಚಕ್ರಪ್ರಯೋಗವಾಗಲಿ ರತ್ನಾಕರನ 'ದಿಗ್ವಿಜಯ'ದಲ್ಲಿ ಇಲ್ಲವೇ ಇಲ್ಲ.

ಬಾಹುಬಲಿಯ ಅಂತರಾತ್ಮಕ್ಕೆ ಕವಿದಿದ್ದ ಮಾನಃ ಕಷಾಯದ ಮುಸುಕನ್ನು ಚಕ್ರೇಶ ಅನಾವರಣ ಮಾಡುತ್ತ ಯೋಗವಿಜಯದ ಉದ್ಘಾಟನೆ ಎಸಗಿರುವನು. ಭರತೇಶ ವೈಭವ ಸಾವಿಲ್ಲದ ಕೃತಿಯಾದರೂ ನೋವಿಲ್ಲದ ಕೃತಿಯೇನಲ್ಲ. ಭರತೇಶನ ಬೃಹದ್ ಬಂಧುವರ್ಗದಲ್ಲಿ ಒಬ್ಬರಾದನೋಲೊಬ್ಬರು ನಿರ್ವೇಗರೋಗಕ್ಕೆ ತುತ್ತಾಗಿ ತಪವೆಸಗಲು ಕಾಡುಪಾಲಾಗುವ ದಾರುಣಮಯ ದೃಶ್ಯಗಳಿಂದ ಮುಂದಿನ ವಿಜಯಗಳೆಲ್ಲ ಗಿಜುಗುಟ್ಟಿವೆ! ಯಶಸ್ವತೀದೇವಿ ತನ್ನ ಮಗನಾದ ಅನಂತವೀರ್ಯನ ಸಾನ್ನಿಧ್ಯದಲ್ಲಿ ಸನ್ಯಾಸಿನಿಯಾದಳು. ಭರತೇಶ ಧರ್ಮಪ್ರಭಾವನೆಗಾಗಿ ರಜತಾದ್ರಿಯಲ್ಲಿ ಜಿನಾಲಯಗಳನ್ನು ನಿರ್ಮಿಸುವನು. ಚಕ್ರೇಶನ ಬಲಗೈ ಆಗಿದ್ದ ಮೇಘೇಶ ದಿಗಂಬರ ಮುನಿಯಾಗುವನು. ಈ ಸುದ್ದಿಯನ್ನು ಕೇಳಿಕೊಂಡು ಭರತೇಶನ ನೂರು ಜನ ಮಕ್ಕಳಿಗೂ ಕೌಮಾರ್ಯದಲ್ಲೇ ಸಂಸಾರ ಬೇಡವಾಯಿತು. ಅವರೂ ಕಾಡುಪಾಲಾದರು; ಪ್ರಥಮ ತೀರ್ಥೇಶನ ಬಳಿ ಧಾವಿಸಿ ನೂರುಜನವೂ ಒಟ್ಟಾಗಿ ಅವಸರವಸರವಾಗಿ ಬೆಂದಮನೆಯಲ್ಲಿ ಹಿರಿದುದೇ ಲಾಭ ಎಂದುಕೊಂಡು ತಲೆಗೂದಲನ್ನು ಕೈಯಾರೆ

ಕಿತ್ತುಕೊಂಡರು ; ಉಟ್ಟಿದ್ದ ಬಟ್ಟೆಬರೆಯನ್ನು ಹರಿದು ಚಲ್ಲಿದರು; ತೊಟ್ಟಿದ್ದ ಆಭರಣಗಳನ್ನು ದಿಕ್ಕಿಗೊಂದರಂತೆ ಎಸೆದುಬಿಟ್ಟರು ; ಅಂತು ಅವರೆಲ್ಲ ಬತ್ತಲೆಯ ಸನ್ಯಾಸಿಗಳಾಗಿ ಹೋದರು ! ಇದಾದ ಮೇಲೆ ಮೂರು ಲೋಕಕ್ಕೂ ರಕ್ಷಾಕವಚವಾಗಿದ್ದ ಆದಿತೀರ್ಥಂಕರ ನಿರಾಕಾರವಾಗಿ ನಿರ್ವಯಲಾಗಿ ಭರತೇಶನ ಕಣ್ಣೆದಿರೇ ಕರಗಿ ಹೋದನು ! ಈ ಸಂಕಟದಿಂದ ಭರತೇಶನ ತಲೆಯಲ್ಲಿ ನರೆ ಗೂದಲು ಒಂದೋ ಎರಡೋ ಮೂಡಿದವು. ಅವು ಕಣ್ಣಿಗೆ ಬೀಳು ತ್ತಿದ್ದಂತೆ ಚಕ್ರೇಶನಿಗೆ ವೈರಾಗ್ಯೋದಯವಾಯಿತು. ಭದ್ರಪರಿ ಣಾಮಿಯಾದ ಈತ ಅಂದೇ ಮನೆ ತೊರೆದನು. ಮರುಕ್ಷಣದಲ್ಲೇ ದಿಗಂಬರನಾದನು. ದಿಗಂಬರನಾಗುತ್ತಿದ್ದಂತೆ ಜಿನನಾಗುವನು ; ನೋಡುತ್ತಿದ್ದಂತೆ ಸಿದ್ಧನಾಗುವನು. ಮುಂದಿನ ಅರ್ಕಕೀರ್ತಿ ವಿಜಯದತುಂಬ ಭರತೇಶನ ಹೆಮ್ಮಕ್ಕಳೆಲ್ಲ ಬಂದು ಗೋಳ್ಗರೆಯು ವರು ! ಭರತೇಶನಿಲ್ಲದ ಲೋಕ ಯಾರಿಗೂ ಬೇಡವಾಗುವುದು. ಕೊನೆಗೆ ತಂತಮ್ಮ ಮಕ್ಕಳಲ್ಲಿ ಬಲವಂತವಾಗಿ ಒಬ್ಬಿಬ್ಬರನ್ನು ಒಪ್ಪಿಸಿ ಅಳಿದುಳಿದವರೂ ಸಾಧಕರಾಗಿ ತಪವೆಸಗಿ ಮುಕ್ತರಾಗು ವರು.[21]

ವಸ್ತುವಿನ್ಯಾಸದಲ್ಲಿ ರತ್ನಾಕರನ ಜಾಣ್ಮೆ ಅಸಾಧಾರಣವಾ ದುದು ; ತನ್ನ ಅಪೂರ್ವ ಕಲ್ಪನಾ ವಿಲಾಸದಿಂದ ಸಂಧಿಸಂಧಿ ಗಳನ್ನೂ ವಿಸ್ತರಿಸಿ ಕಾಮನಬಿಲ್ಲೂ ಬಿಲ್ಲುಂ ಬೆರಗಾಗುವಂತೆ ಬಣ್ಣಬಣ್ಣದ ಚಿತ್ರಗಳನ್ನು ಬಿಡಿಸಿರುವನು ; ಸಹ್ಯಾದ್ರಿಯಂತೆ ಭರತೇಶವೈಭವವನ್ನು ಎಂಭತ್ತು ಸಂಧಿಗಳಾಗಿ ಹಬ್ಬಿಸಿ ಹೆಜ್ಜೆ ಹೆಜ್ಜೆಗೂ ಸಹಜತೆಯ ಒಪ್ಪವಿಟ್ಟು, ಹೇಳಿಕೊಳ್ಳುವಂತೆ ವಸ್ತು

[21] ಭರತೇಶನ ಗಂಡುಮಕ್ಕಳಲ್ಲಿ ಮರೀಚಿ ಒಬ್ಬನನ್ನು ಬಿಟ್ಟು ಉಳಿದವ ರೆಲ್ಲ ಮುಕ್ತರಾಗುವರು ; ಹೆಣ್ಣುಮಕ್ಕಳೆಲ್ಲ ಸ್ವರ್ಗವನ್ನು ಪಡೆಯುವರು.

ವಿಲ್ಲದಿದ್ದರೂ ವರ್ಣನಾವೈಖರಿಯಲ್ಲಿ ಸಾವಿರಾರು ಸಂಗತಿಗಳನ್ನು ಚಿತ್ರಿಸಿ ವಾಚಕವೃಂದವನ್ನು ಸಮ್ಮೋಹನ ಜಲಧಿಯ ಸುಳಿಯಲ್ಲಿ ತಿರುಗಿಸಿ ನೈಮರೆಸಿಬಿಡುವನು. ರತ್ನಾಕರನ ಪ್ರತಿಭಾಮಾನಸಗಂಗೋತ್ರಿಯಲ್ಲಿ ಮಿಂದು ದಿನಬಳಕೆಯ ಸುದ್ದಿಗಳೂ ಕಲೆಯ ಬೆಳದಿಂಗಳಲ್ಲಿ ಓಕುಳಿಯಾಡುವ ಮನಮೋಹಕ ದೃಶ್ಯವನ್ನು ಕಂಡೇವು! ಒಮ್ಮೊಮ್ಮೆ ಸಹ್ಯಾದ್ರಿ ಪಂಕ್ತಿಯೆಲ್ಲ ಅಡಿಯಿಂದ ಮುಡಿತನಕ ಮಂಜಿನ ಮಕಮಲ್ಲಿನಲ್ಲಿ ಮುಳುಗಿಹೋಗಿ ನಿರಾಕಾರದಲ್ಲಿ ಲಯಹೊಂದುವಂತೆ ಭರತೇಶವೈಭವದ ಸಾಧಾರಣ ಹಾಗೂ ಅಸಾಧಾರಣ ದೃಶ್ಯಗಳೆಲ್ಲ ಹಂಸಕಲೆಯ ಕ್ಷೀರಸಾಗರದ ಹೆದ್ದೆರೆಯ ತೊಳತೆಕ್ಕೆಯಲ್ಲಿ ಬಿದ್ದು ಬ್ರಹ್ಮಾದ್ವೈತ ನಾಟ್ಯವಾಗಿ ರೂಪಾಂತಗೊಳ್ಳದಿರವು!

ರತ್ನಾಕರನ ಮೋಹಕಶೈಲಿಗೆ ಒನಪು ಒಯ್ಯಾರ ಒಂದು ಮುಖವಾದರೆ ವಾಸ್ತವಿಕತೆ ಇನ್ನೊಂದು ಮುಖ. ಹೃದಯಂಗಮವಾದ ಕಲ್ಪನಾವಿಲಾಸದಲ್ಲಿ ಓಲಾಡಿಕೊಂಡು, ಪ್ರತಿಭಾ ಸಿದ್ಧರಸದಲ್ಲಿ ಮುಳುಗಾಡಿ ಪುಳುಕಗೊಂಡು, ಅಡಿಯಿಂದ ಮುಡಿತನಕ ಎಲ್ಲಿ ನೋಡಿದರೂ ಕಲೆಯ ಲಾವಣ್ಯರಸ ತೊಟ್ಟಿಡುವಂತೆ ಈ ಮಹಾಕವಿ ಕನ್ನಡದ ನಂದನವನದಲ್ಲಿ ಈ ಪಾಡು ಗಬ್ಬದ ಕಾಬೂಲು ದ್ರಾಕ್ಷಿ ಗೊಂಚಲನ್ನು ಇಳಿಬಿಟ್ಟಿರುವನು! ಈತನ ಶೈಲಿ ಎಷ್ಟು ಸಹಜವೋ ಅಷ್ಟೇ ಸರಳ, ಅಷ್ಟೇ ಬಂಧುರ!

ರತ್ನಾಕರ ಬೆಡಗು ಬಿನ್ನಾಣದಿಂದ ಬಣ್ಣಿಸುವಾಗ ದೃಶ್ಯ ಕಣ್ಣಿಗೆ ಕಟ್ಟಿದಂತಾಗಿ ಓದುಗ ಭರತೇಶನ ಅಂತರಂಗದ ಪರಿವಾರದಲ್ಲಿ ತಾನೂ ಒಬ್ಬನಾಗಿ ಭರತೇಶ ವೈಭವದಲ್ಲಿ ಪಾಲ್ಗೊಳ್ಳದಿರನು. ಪರಿಪಕ್ವದ ಸಂಭಾಷಣಾಶೈಲಿ ಸಂದರ್ಭೋಚಿತವಾಗಿ ಮೂಡಿ

ಸಹಜವಾದ ನಾಟಕೀಯತೆ ತಾನೇ ತಾನಾಗಿ ಲಾಸ್ಯವಾಡಿದೆ
ಈ ಶ್ರವ್ಯಕಾವ್ಯದಲ್ಲಿ ಅಲ್ಲಲ್ಲೇ ದೃಶ್ಯ ಕಾವ್ಯವಾಗಲು ಎಲ್ಲಾ
ಅರ್ಹತೆಗಳಿರುವ ಸನ್ನಿವೇಶಗಳೆಷ್ಟೋ ಕಣ್ಣಿಗೆ ಕಾಣುವಂತೆ
ಕಂಗೊಳಿಸುತ್ತಿವೆ. ಮಕರಂದಾಜಿ ಹಾಗೂ ಪದ್ಮಿನಿಯರು ತಮ್ಮ
ಪ್ರಾಣೇಶನಮೇಲೆ ಎಸಗುವ ಮನಮೋಹಕ ಮಲ್ಲಗಾಳಗ
ಗಂಡುಗರ್ವವನ್ನು ಕರಗಿಸಿದ. ಸುಭದ್ರಾ ಪರಿಣಯ, ವಾತ್ಸಲ್ಯದ
ತೆರೆಯೆದ್ದು ಮೊರೆಯುವ ಭರತಬಾಹುಬಲಿಯ ಸಮರ ಸನ್ನಾಹ
ಪದವಿಪ್ರತಿಷ್ಠೆಗಳನ್ನು ಇಕ್ಕಿ ಮೆಟ್ಟಿದ ಸುಲೋಚನಾಸ್ವಯಂವರ
ಕೌಮಾರ್ಯದಲ್ಲೇ ನಿರ್ವೇದಗೊಂಡು ಭರತೇಶನ ಮಕ್ಕಳು
ತೀರ್ಥೇಶನ ಸನ್ನಿಧಾನದಲ್ಲಿ ಯತಿದೀಕ್ಷೆಗಾಗಿ ಕೈಯೊಡ್ಡಿ ಅಂಗ
ಲಾಚಿದ ಮುಕುತಿ ಕನ್ಯಾನ್ವೇಷಣೆ—ಈ ಸಂದರ್ಭಗಳನ್ನು ಯಾವ
ತೇಪೆಯೂ ಹಾಕದೆ ಕವಿಯ ಮಾತುಗಳನ್ನೇ ಪೋಣಿಸಿ ಸೊಗ
ಸಾದ ನಾಟಕಗಳನ್ನಾಗಿ ಮಾಡಿಬಿಡಬಹುದು. ನಾಟಕರಂಗದಲ್ಲಿ
ಇವುಗಳನ್ನು ಆಡಿ ತೋರಿಸಲೂಬಹುದು. ರತ್ನಾಕರ ಇವನ್ನೆಲ್ಲ
ನಾಟಕಗಳಾಗಿ ರಚಿಸಿ, ರಂಗದಲ್ಲಿ ಪ್ರದರ್ಶನವಾದುವನ್ನು ಕಣ್ಣಾರೆ
ಕಂಡಮೇಲೆ ಸಂತೃಪ್ತನಾಗಿ ಅನಂತರ ತನ್ನ ಮಹಾಕಾವ್ಯದಲ್ಲಿ
ಆಚಂದ್ರಾರ್ಕವಾಗಿರಲೆಂದು ಜೋಡಿಸಿದನೋ ಏನೊ!

ನಾದಬ್ರಹ್ಮವನ್ನು ಆವಾಹನೆಮಾಡಿ ರತ್ನಾಕರ ಅದನ್ನು ಶಬ್ದ
ಬ್ರಹ್ಮವಾಗಿ ರೂಪಾಂತರಿಸಿ ಕವಿ ಬ್ರಹ್ಮನಾಗಿ ವಿಜೃಂಭಿಸುವನು.

**ಕೆಂಬಾಯ ನಸುದೆರೆದಾಯೆಂಪುರಾಗವ । ನಂಬುಜಾನನೆ ತುಡುಕಿದಳು ॥**
**ತುಂಬಿಗಳೊಡನೆ ಘುಂಮೆಂವೆಡಬಲಕೆ ತೆ। ರಂಬೊಳೆದವು ಶ್ರುತಿಗೊಡುತ ॥**
**ವೀಣೆಯೊಳೊಮ್ಮೆ ತೋರುವಳು ರಾಗವ ತನ್ನ। ಗೋಣೊಳಗೊಮ್ಮೆ—**
**ತೋರುವಳು ॥**

ವೀಣೆಯನೊಂದ ಬಿಟ್ಟೊಂದ ನುಡಿಸುವಳೀ । ಜಾಣೆಯೆಂಬಂತಿಹು
ದಾಗ ॥೬॥*

ಒಳಗುಮ್ಮಿದಾನಂದರಸ ತನ್ನ ತನುತುಂಬಿ ತುಳುಕಿ ಹೊರಗೆ ಸೂಸುವಂತೆ॥
ತೆಳುವಸಿರಿಂದ ಬಾಯ್ದೆರೆಯೊಳು ಸುಸ್ವರ । ಹೊಳೆದುಮೋಹಿಸುತಿದ್ದ
ದಾಗ ॥೧೩॥*

ಏನಕಲ್ತಳೊ ಎಲ್ಲಿ ಕಂಡಳೊ ಮುಝುಪುಂ । ಖಾನುಪುಂಕನೊಳು
ಮೇಲ್ಮೇಲೆ ॥
ತಾನವ ಹೊಸಹೊಸತಾಗಿ ತಂಪಳು ಜೇನ । ಸೋನೆಯುಕರೆವ
ಳೆಂಬಂತೆ ॥೧೪॥*

ಊಂಜದಿಂದೆತ್ತಿ ಒಳಡಕದಿಂಪದಗಿಸಿ । ಮಿಂಚಿನಂತೊಡನೇಳಿಸುವಳು ॥
ಅಂಚೆಯನಡೆದಾಡಿಸುವಂತೆ ರಾಗದ । ಸಂಚುಗಾಣಿಸಿ ತೋರು
ತಿಹಳು ॥೧೭॥*

ಕಂಮುಕಂಮುನೆ ತಾನಗಳ ತಂದು ಕೊರಳೊಳು । ಗುಮ್ಮಿಸಿಹಾಡುವಳಡಕೆ॥
ಜುಂಮುಜುಂಮೆನೆ ಮೈಗೆ ಪುಳಕವೇರಲು ರಾಯು । ಸುಮ್ಮಾನಮಿಗೆ
ಕೇಳುತಿಹನು ॥೨೧॥*

ಬಂದತಾನವ ಬರಲೀಸದೆ ಹೊಸಹೊಸ । ತೊಂದೊಂದು ಪರಿಯ
ತಾನಗಳಾ ॥
ತಂದುತಂದೆದೆಗೊಳಿಸುವಳುಗಾನವ ಕರೆ । ತಂದು ತೋರಿಸುವಂತೆ
ನೃಪಗೆ ॥೧೮॥*

ತಾನತಾನಕೆ ರಾಯ ಹಿಗ್ಗುತಿಹನು, ಗಂಡ । ನಾನಂದಕವಳುಬ್ಬುತಿಹಳು ॥
ಗಾನವೊಪ್ಪಿದ.ಹಾಗ ಗಂಧಗಿರಿಯ ಪವ।ಮಾನ ಕಂಮನೆ ತೀಡಿದಂತೆ॥೧೯॥
ಮಂಜುಲನೇತ್ರವಟ್ಟೆಯ ಸೀಳಿದಂತಪ । ರಂಜಿಸರಿಗೆ ದೆಗೆದಂತೆ ॥
ಕಂಜದ ಕಂಪನುಂಡೇಳ್ವ ತುಂಬಿಯುಗಾನ । ರಂಜನೆಯನೆ
ರಾಗಿಸಿದರು ॥೨೭॥*

* ಭ. ವೈ. ಸಂ. ೧೧ ರಿಂದ ಆರಿಸಿವೆ.

ಅಳಿವಂತೆರಾಗವ ತುಳಿವಂತೆ ಜಾಡ್ಯವ । ಹಿಳಿವಂತೆ ಮೋಹನ ರಸವಾ ॥
ತೊಳೆವಂತೆ ಮನವ ಸಂಜೀವನಸಾಮೃತವನು । ತಳಿವಂತೆ ರಾಗ
ದೋರಿದರು ॥೨೮॥*

ಹಬ್ಬಿಸುವಂತೆ ರಾಗವ ಸ್ವರ್ಗಲೋಕಕೆ । ಉಬ್ಬಿಸುವಂತೆ ರೋಮಗಳಾ॥
ಕಬ್ಬಿನಬಿಲ್ಲ ಜೀವೊಡೆದಂತೆ ಪಾಡಿದ । ರೊಬ್ಬೊಬ್ಬರಿಂಪುನುಂಪಿ
ನೊಳು ॥೨೯॥*

ಉಂಚವೊಳಡಕದೊಳೊಡನುಂಚದೊಳುಸಂಚು । ವಂಚನೆಯೊಳು–
ಸರಸದೊಳು ॥
ಮಿಂಚುಮಿಂಚುಗಳು ಪಳಂಚಿದಂತಮೃತವ । ಹಂಚುವಂತೊಲೆದಾ–
ಡಿದರು ॥೩೦॥*

ಇಂಚರವತ್ತಿತ್ತ ಜಾರದೆ ರಾಗದ । ಮಿಂಚುಮಾಸದೆ ಸೊಬಗೆಯರು ॥
ಪಂಚಗುರುಗಳ ಪಾಡಿಪರು ಪಾತಕಹರಿ । ಹುಂಚಾಗಿ ಹರಿದು–
ಹೋಹಂತೆ ॥೩೧॥*

ಗಾನಸುಧೆಗೆ ರತ್ನಾಕರ ವರ್ಣನಾ ವೈಖರಿಯು ಬಣ್ಣಕಟ್ಟಿ ಶಬ್ದ ಜಾಲದಲ್ಲಿ ಬಣ್ಣಿಸಿ ಕಲೆಯ ರಂಗೇರಿಸಿರುವನು. ರಾಗಾಲಾಪನೆಗೆ ಅನುಕೂಲವಾದ ಪದಪುಂಜವನ್ನು ಬಳಸಿರುವ ಮೋಡಿಯೋ ಮೋಡಿ! ಕುಂಡಲಿನಿ ಕಲೆ ಸೆಲೆಯೊಡೆದು ಚಿಮ್ಮುವಂತೆ ಗಾನಕಲೆ ರತ್ನಾಕರನ ಕೈಲಿ ಪಿಚಕಾರಿಯ ಪನ್ನೀರಾಗಿ ಓದುಗರಮೇಲೆ ಚೆಲ್ಲಾಡದಿರದು. ಇಲ್ಲಿಯ ಗಾನ ಶ್ರೀದೇವಿಯ ಶೋಭಾನದಂತೆ ಇಂಪಾಗಿ ಪೆಂಪಾಗಿ ಕೊನೆಗೆ ಕನ್ನಡದ ಕಂಪಾಗಿ ಕಂಗೊಳಿಸು ವುದಲ್ಲ!

ಸಂಜೆಗೆಂಪೊಲೆವಂತೆ ತೆರೆ ತೊಲಗಿತು ಕಣ್ಗೆ । ಕಂಜಾಕ್ಷಿಯರು
ಕಾಣಿಸಿದರು ॥

* ಈ ಚಿನ್ನೆಯ ನಡುವಿರುವ ಪದ್ಯಗಳನ್ನು ಭ. ವೈ. ಸಂ. ೧೩ರಿಂದ ಸಂಗ್ರಹಿಸಿದೆ.

ಕಂಜಿಪನಳಿತೋಳ್ಗಳನೆತ್ತಿ ಸುವರ್ಣ । ಪುಷ್ಪಾಂಜಲಿ
ಮಾಡಿದರೊಡನೆ ॥೫೬॥ †

ಪಚ್ಚೆಯ ಚಲ್ಲಣ ಪಂಚವರ್ಣದ ಕಾಸೆ । ಬೆಚ್ಚ ಮುತ್ತಿನ ಮೊಲೆಗಟ್ಟು॥
ಅಚ್ಚ ಜವ್ವನೆಯರಿದ್ದರು ನೋಡುವರ ಮನ । ಹುಚ್ಚಿಡುವ ಧರೆಗೆ
ಬೀಳ್ವಂತೆ ॥೫೮॥ †

ತೊಟ್ಟ ಸಿಂಗಾರದ ಕೊಂಕುಬಿಂಕಣೆ ರಸ । ತೊಟ್ಟಿಡುವಂತೆ ಲಾವಣ್ಯ॥
ಮುಟ್ಟೆ ಕಂದುವ ಮೈಯ ಪೆಂಗಳಿದ್ದರು ನಿಂದು । ಕಿಟ್ಟ ಸೋಲಿಸೆ
ರಾಜಸಭೆಯಾ ॥೬೦॥ †

ಎತ್ತಿದ ತೆರೆಯನು ಕೊರಳುತನಕ ಮೆಲ್ಲ । ನೊತ್ತಿ ತಗ್ಗಿಸಿ ಕಾಣಿಸಿದರು॥
ಮತ್ತಕಾಸಿನಿಯರ ಮೊಗಗಳಿದ್ದವು ಕಾಂತಿ । ವೆತ್ತ ಕನ್ನಡಿಯ
ಸಾಲಂತೆ ॥೩೯॥*

ಅಂಗಡಲಿಂದೇಳ್ವ ಚಂದ್ರರ ಸಾಲೊ ಪ । ದ್ಮಂಗಳ ಸಾಲೊ ಯೆಂಬಂತೆ॥
ಹೆಂಗಳ ಮೊಗಗಳೆಸೆದವೆಳೆ ಮುತ್ತು ಬೆ । ಡಂಗಾದ
ತೆರೆಯಮೇಲಾಗ ॥೪೦॥*

ಮುತ್ತಿನ ಬೊಟ್ಟು ಮುತ್ತಿನ ಸರ ತುರುಬಿನ । ಮುತ್ತಿನ ಬಲೆ
ಮುತ್ತಿನೋಲೆ ॥
ತತ್ತ ಮೂಗಿತಿಯಿಂದ ಮೊಗಗಳಿದ್ದವು ತಾರೆ । ಮುತ್ತಿದ ಬಹು-
ಚಂದ್ರರಂತೆ ॥೫೨॥*

ನಾಟ್ಯರಂಗದ ತೆರೆಯೇಳುತ್ತಿದ್ದಂತೆ ಲಾವಣ್ಯಾಂಗಿಯರ ಸುರ ಸೌಂದರ್ಯದ ನೊರೆಯೇಳುವುದನ್ನು ಶೃಂಗಾರಕವಿ ಓದುಗರ ಕಣ್ಣಿಗೆ ಕಟ್ಟುವಂತೆ ನಿರೂಪಿಸಿರುವನು.

---

†ಭ. ವೈ, ಸಂ ೧೨; *ಭ. ವೈ, ಸಂ ೧೩.

ಎತ್ತ ನೀಡಿತು ಹಸ್ತವತ್ತ ದೃಷ್ಟಿಗಳಲ್ಲಿ । ಚಿತ್ತವೆಲ್ಲವು ಭಾವರಸವು ॥
ತತ್ತತ ತಿತ್ತಿತಿ ಯಾರೆ ಯಾರೆಯೆನ । ಲತ್ತಿತ್ತಲೊಲೊದು
ಹರಿದಳು ॥೬೭॥†

ಮರ್ದಳ ತಾಳಾನುಗತಿಯೊಳು ನಡೆದಳು । ಪೆರ್ದೆರೆಯಂತೆ ಮುಂದೊತ್ತಿ ॥
ಸಾರ್ದಳು ಹಿಂದಕೆ ಕಡಲ ಭರತವೊಳ । ಸಾರ್ದಿಳವಂತೆ
ಜೋಕೆಯೊಳು ॥೨೪॥†

ಸುಳಿದು ಸುತ್ತುವಳು ನಾಟ್ಯದೊಳು ಸಮ್ಮೋಹನ । ಜಲಧಿಯ ಸುಳಿಯೊ
ಯೆಂಬಂತೆ ॥
ಬಲಕೆಡಕೊಲೆದು ಹರಿವಳೆಳಬಿಸಿಲಲ್ಲಿ । ಯೆಳನಾಗ ಹರಿವಂತೆ
ಮುರಿದು ॥೭೭॥†

ಆಳಾಪಗೇಳುತ ನಿಂದರಿಬ್ಬರು ನಾಟ್ಯ । ಶಾಲೆ ಮೋಹನದಲ್ಲಿ ಮುಳುಗೆ ॥
ಸೀಳಿಹರಿದೆಡೆ ಬಲಕೆ ಬೆರಸಿ ಪಾರಿ । ಪಾಳದಪಕ್ಕಿಗಳಂತೆ ॥೮೭॥†
ಕಾಲುಕದಲಿ ಮೆಲ್ಲನೊಲೆದು ನಡೆದರು । ತಂಗಾಳಿಗೊಲೆವ ಲತೆಯಂತೆ ॥
ಸಾಲುಗೊಂಡುದ ಬಿಟ್ಟು ಬಟ್ಟಿತಾದರು ಕುಮ್ಮ । ಗೋಲನ
ಚಕ್ರದಂಡದೊಳು ॥೬೦॥*

ಉಪ್ಪರಿಸುವಳೂರ್ಧ್ವಲೋಕಕೆ ಹೋಹಂತೆ । ಬಪ್ಪಳು ದಿವಿಜೆ ಬಹಂತೆ ॥
ದೊಪ್ಪ ದೊಪ್ಪನೆ ಪಜ್ಜೆಯಿಡುವಳು ಮಗುಡವ । ಸೊಪ್ಪು ಸೊಪ್ಪನೆ
ತುಳಿವಂತೆ ॥೬೫॥*

ರಂಗದೊಳೆಲ್ಲರು ಮೊತ್ತವಾಗಿರೆ ನಿಂದು । ಹೆಂಗಳು ಮುತ್ತೆಂಟು ದೆಸೆಗೆ ॥
ದಾಂಗುಡಿಯಿಟ್ಟು ಸಾಲ್ಪಿಡಿದಾಗ ಶೃಂಗಾರ । ಗಂಗೆ ಪರಿವ
ವೊಲಾಡಿಪರು ॥೬೮॥*

ತೆರೆಯನಟ್ಟುವ ತೆರೆಯಂತೊಬ್ಬರೊಬ್ಬರ । ಬೆರಸಿ ಜೆನ್ನಟ್ಟಿ ಹರಿವರು ॥
ಮುಂದೆಂಟು ಮಂಡಿಯು ಸುಳಿಯಂತೆ ಘುಗಘುಗ । ನಿರದೆ
ಸುತ್ತುವರೇನನೆಂಬೆ ॥೯೯॥*

---

†ಭ. ವೈ. ಸಂ, ೧೨ ; *ಭ. ವೈ, ಸಂ. ೧೩.

ಕಾಂಚನ ರತ್ನದಾಭರಣದ ಕಿರಣ ಪ । ಳಂಚೆ ನಿಜಾಂಗಕಾಂತಿಯೊಳು ॥
ಮಿಂಚಿನ ಲತೆಯಂತೆ ಮಿಣಿಮಿಣಿಸುತ ಕಂಚು । ಮಿಂಚಾಗಿ
ಹೊಳೆವರತ್ತಿತ್ತ ॥೧೮॥*

ರತ್ನಾಕರನ ನರ್ತನಪ್ರಪಂಚವನ್ನೀಕ್ಷಿಸುವಾಗ ನಾವು ಖೇಚರ ಲೋಕವನ್ನು ಹೊಕ್ಕಂತಾಗುವುದು. ನಂನಮ್ಮ ಅಂತರಂಗವೇ ನಾಟ್ಯರಂಗವಾಗಿ ಕಲೆಯ ತಂಗಾಳಿ ತೀಡಿದಂತಾಗಿ ನವರಸದ ಜೇನ ಸೋನೆ ಹನಿವಂತೆ ಭಾಸವಾಗದಿರದು. ನಾಟ್ಯಪ್ರಸಂಗ ದಲ್ಲಿ ರತ್ನಾಕರ ಕೊಟ್ಟಿರುವ ಉಪಮೆಗಳೆಲ್ಲ ಮಲೆನಾಡಿನ ಸಹಜವಾದ ನಿಸರ್ಗ ಸೌಂದರ್ಯವೇ ಆಗಿದೆ. ಈ ಸಂದರ್ಭದಲ್ಲಿ ರತ್ನಾಕರನ ಕಾವ್ಯ ಕನ್ನೆ ಉಪಮಾಲೋಲೆಯಾಗಿ ಓಲಾಡಿರು ವಳು! ಉಪಮೆಗಳಿಂದಲೇ ಬೆಲೆವೆಣ್ಣುಗಳ ನರ್ತನಕ್ಕೆ ಕಳೆಕಟ್ಟಿ ಸಿರುವನು. ಭರತೇಶನ ರಾಣಿಯರಲ್ಲಿ ಹದಿನಾರುಮಂದಿ ಮನ ದನ್ನೆಯರು, ಮನುಗಳ ಸಂಪದವೆಲ್ಲ ಒಂದುಗೂಡಿ ಬಂದಂತೆ ಬಂದು ತಾವರೆಗೊಳನೆದ್ದು ಕುಣಿವಂತೆ ನರ್ತಿಸುವರು! **ಪಂಪನ ನೀಲಾಂಜನೆ ನರ್ತಿಸಿದ್ದು ಸಂಸಾರದಲ್ಲಿ ರಸಮೂರ್ಛೆ ಗೊಳಗಾಗಿ ಮೈಮರೆತಿದ್ದ ಆದಿದೇವನನ್ನು ಎಚ್ಚರಿಸಿ ಬೈರಾಗಿಯನ್ನು ಮಾಡಲೋಸುಗ. ಇತ್ತ ಭರತೇಶನ ಭಾರ್ಯೆಯರು ನರ್ತಿಸುವುದು ವೀತರಾಗರಸಿಕನಾದ ಪ್ರಾಣೇಶನನ್ನು ರಾಗರಸಿಕನನ್ನಾಗಿ ಮಾಡಿ ಸಂಸಾರ ಸಾರವನ್ನುಣಿಸಲೋಸುಗ!**

ಮೂಗರು ಕಂಡ ಕನಸಿನಂಥ ಆಧ್ಯಾತ್ಮಿಕ ಅನುಭಾವವನ್ನೂ ರತ್ನಾಕರ ರಂಗುರಂಗಾಗಿ ಚಿತ್ರಿಸಿಬಿಡುವನು.

---

* ಭ.ವೈ, ಸಂ. ೧೩.

ಎಳಮಿಂಚಿನಂದದ ಬೊಂಬೆಯೊ ತಿಂಗಳ । ತಿಳಿವೆಳಗಿನೊಳಾದ
ರೂಪೋ ॥
ಪಳುಕಿನ ಪುತ್ತಳಿಯೋಯೆನೆ ಕ್ರಮದಿಂದ । ಹೊಳೆವುದೊಳಗೆ
ತನ್ನರೂಪು ॥೭೭॥*

ರೂಪೆಲ್ಲ ಬೆಳಗು ರೂಪೆಲ್ಲ ಸುಜ್ಞಾನ ವಾ । ರೂಪೆಲ್ಲ ದರ್ಶನಶಕ್ತಿ ॥
ರೂಪೆಲ್ಲ ಸುಖವಾದ ತ್ರಿಭುವನ ಶೃಂಗಾರ । ರೂಪನ ಕಂಡನಾ
ಸೊಬಗಾ ॥೨೬॥*

ಸುತ್ತಲು ಪ್ರಭೆಯಾಗಿ ಸುತ್ತಲು ಸುಖವಾಗಿ । ಸುತ್ತಲು ಸುಜ್ಞಾನವಾಗಿ ॥
ಚಿತ್ತದೊಳಾತ್ಮ ತೋರುವನೊಂದು ಜ್ಯೋತಿಯ । ಪುತ್ತಳಿಯಂತೆ
ಪ್ಯೆದುಂಬಿ ॥೩೪॥*

ರತ್ನಾಕರ ನಿರಾಕಾರವಾದ ಬಟ್ಟಬಯಲಿಗೆ ಬಣ್ಣ ಕಟ್ಟಿ ಆತ್ಮನ ಅನಂತಸಿರಿಯನ್ನು ಅಭಿವ್ಯಕ್ತಿಗೊಳಿಸಿರುವನು.

ಬಯಲೊಳು ಮುಳುಗುವಂತೊಳಗೆ ಮುಳುಗುವನು । ಬಯಲೊಳು
ನಿಲುವಂತೆ ನಿಲುವಾ ॥
ಬಯಲ ಪಾಲ್ಗೊರೆಯು ಪೀರ್ವಂತೆ ಪೀರ್ದೋದರ । ಬಯಕೆಯಿಲ್ಲದೆ
ತಣಿದಿಹನು ॥೩೬॥*

ಚಂದ್ರಸೂರ್ಯರ ಗೋಷ್ಠಿಯೊಳು ಕುಳಿತಂತೆ ಜಿ । ನೇಂದ್ರರ ಸಂಪದ
ಸಾರಿದಂತೆ ॥
ರುಂದ್ರಸಿಪ್ಪರೊಳೈಕ್ಯವಾದಂತೆ ರಾಜಯೋ । ಗೀಂದ್ರನಿದ್ದನುಧ್ಯಾನ
ದಲ್ಲಿ ॥೫೭॥*

ಬೊಲ್ಲನಿಲ್ಲದೆ ವೈಹಾಳಿಮಾಳ್ಪನು ವೀಣೆ । ಯಿಲ್ಲದುಯ್ಯಾಲಾಡುತಿಹನು ॥
ನಲ್ಲಳಿಲ್ಲದೆ ರತಿಸುಖನ ಸುಖಿಸುವನ । ದೆಲ್ಲಿ ಕಲಿತನೊ
ರಾಜೇಂದ್ರ ॥೬೬॥*

---

* ಭ. ವೈ. ಸಂ. ೨ ; * ಭ. ವೈ. ಸಂ. ೧೮

ಉಟ್ಟುಕೊಂಡಂತೆ ಬೆಳ್ದಿಂಗಳ ಮೈತುಂಬ | ಲಿಟ್ಟುಕೊಂಡಂತೆಳೆ
ಮಿಂಚಾ ||
ಕಟ್ಟಾಣಿ ಮುಕ್ತಿಕಾಂತೆಯನಾಗ ತೋಳ್ ತುಂಬ | ತೊಟ್ಟುಕೊಂಡಂ
ತಿರ್ದುದವಗೆ ||೪೨|| †

ಆಕಾಶದೊಳು ಹರಿದಾಡುವಂತಾ ಸಿದ್ಧ | ಲೋಕದೊಳೆಡೆಯಾಡುವಂತೆ ||
ಬೇಕಾದಸಿದ್ಧರೊಳೇಕಾಂತಮಾಳ್ಪಂತೆ | ಭೂಕಾಂತನಿರ್ದನಾತ್ಮ
ನೊಳು ||೪೩|| †

'ಉಂಡನ ತೇಗುವಂತಾತ್ಮನ ಕಂಡವನದ ಪೇಳಬೇಕು' *

ಎಂಬ ಮಾತನ್ನು ರತ್ನಾಕರ ಸಾರ್ಥಕಗೊಳಿಸಿರುವನು; ತನ್ನ ಹಂಸಾನುಭವಕ್ಕೆ ಕಾವ್ಯಕಲೆಯ ಬೆಡಗು ಬಿನ್ನಾಣವನ್ನು ತುಂಬಿರುವನು. ಹಂಸಕಲೆಯನ್ನು ಕನ್ನಡ ಕಾವ್ಯಾವನಿಯಲ್ಲಿ ಹೆದ್ದೊರೆಯಾಗಿ ಹರಿಸಿದ ರತ್ನಾಕರನನ್ನು ಕವಿ ಭಗೀರಥನೆಂದರೆ ತಪ್ಪೇನು?

ಅಟ್ಟುವ ತೆರೆಯು ಮುಂದೋಡುವ ತೆರೆಯು ಪೆ | ರ್ಚಿಟ್ಟದಂತೇಳ್ವ
ತೆರೆಗಳಾ ||
ತೊಟ್ಟನೆ ಬಯಲಹ ತೆರೆಗಳನವರು ಕ | ಣ್ಣಿಟ್ಟು ನೋಡಿದರರ್ತಿ
ವಡುತ ||೯೫|| *

ಸಹಜಸುಂದರವಾದ ಸಮುದ್ರದ ಸೊಬಗನ್ನು ಸಾಹಿತ್ಯದಲ್ಲಿ ನಾವು ಕಾಣಬೇಕಾದರೆ ಕವಿರತ್ನಾಕರ ಬರುವತನಕ ಕಾಯಬೇಕಾಯಿತಲ್ಲ!

ಭೇದ ವಿಜ್ಞಾನವನ್ನು ಮಾನವಲೋಕಕ್ಕೆ ದಾನವಿತ್ತು ರತ್ನಾಕರ ತಾತ್ವಿಕಲೋಕದ ಧ್ರುವತಾರೆಯಾಗಿರುವನು!

---

† ಭ. ವೈ. ಸಂ. ೭೨; * ಭ. ವೈ. ಸಂ. ೨; * ಭ. ವೈ. ಸಂ. ೨೩

ನಾಗಲೋಕದೊಳಗಿದ್ದರೇನು ಗುರುತ್ಮಗೆ । ನಾಗರ ಬಾಧೆಗಳುಂಟೆ? ||
ಭೋಗದೊಳಿದ್ದರೇನಾತ್ಮ ವಿಜ್ಞಾನಿಗೆ । ಭೋಗದಿಂದಿಹ
ಕರ್ಮವುಂಟೆ? ||೩೪||*
ಆಗಾಗ ದೇಹ ಬೇರಾತ್ಮ ಬೇರೆಂದು ವಿ | ಭಾಗಿಸಿ ತನ್ನ ತಾನೆನ್ನು ||
ಭೋಗಿಸಿದವರೆ ಕರ್ಮಬಂಧವಿಲ್ಲಾಗಿಯಾ | ಭೋಗಿ ತಾನೆ
ಯೋಗಿಯಲ್ತೆ ||೩೦||*
ಉಂಡರೇನುಟ್ಟರೇನಬಲೆಯರೊಳು ಭೋಗ | ಗೊಂಡರೇನವು
ತನ್ನವೆಂದು ||
ಕಂಡರೆ ಕೆಟ್ಟನನ್ಯಗಳೆಂಬ ಮತಿ ದೃಢ | ಗೊಂಡು ಭೋಗಿಸೆ
ಕೆಡನೆಂಬಾ ||೯೮||*
ಭಾವದೊಳಾತ್ಮನ ನೋಡುತ ಸುಖವನೆ | ಸೇವಿಸುತಿದು ನನ್ನದೆನುತ ||
ಆ ವಸ್ತುವಿನಂದನ್ಯವೆಲ್ಲವು ಪರವೆಂಬ | ಭಾವನೆಯಿರೆ ಕೆಡನವನು ||೯೯||*
ನುಡಿವುದು ಪುದ್ಗಲ ಕೇಳ್ವುದು ಪುದ್ಗಲ ಕ | ಡೆಗೆ ಪುದ್ಗಲ ಸ್ನೇಹ
ಕೋಪಾ ||
ಜಡಿದಿವನೂಂಕಿ ನನ್ನೆದೆಯೊಳಿರಯ್ಯ[22] ಬಾ | ನೊಡಲ ಚಿದಂಬರ
ಪುರುಷಾ ||೧೨೩|| *

ಸಮವಸರಣದಲ್ಲಿ ರತ್ನತ್ರಯಪೀಠದ ಮೇಲೆ ಸಹಸ್ರದಳ ಸಮಾನ್ವಿತವಾದ ಕನಕಕಮಲದಮೇಲೆ ಜಿನೇಂದ್ರ ನಾಲ್ಕು ಬೆಟ್ಟು ಸದುವುಬಿಟ್ಟು ಅಂಟಿಯೂ ಅಂಟದಂತೆ ವಿರಾಜಮಾನ ನಾಗುವನು. ಭೇದವಿಜ್ಞಾನದ ತೌರುಮನೆ ಜಿನೇಂದ್ರನ ಪಾದ

---

*ಭ. ವೈ, ಸಂ. ೨ ; *ಭ. ವೈ, ಸಂ. ೭೭. *ಭ. ವೈ, ಸಂ. ೪೮.
22 ಪುದ್ಗಲವೆಂದರೆ ಚೇತನರೂಪಿ ಆತ್ಮನಿಂದ ಭಿನ್ನವಾದ ಅಜೀವದ್ರವ್ಯ. ರೋಗರುಜಿನಾದಿಗಳೂ, ಗಾಳಿಬೆಳಕುಗಳೂ ಕತ್ತಲೆಯೂ ಪುದ್ಗಲವೇ.

ಮೂಲ! ರತ್ನಾಕರನ ಭೇದವಿಜ್ಞಾನದ ವ್ಯಾಪ್ತಿ ಸಮವಸರಣ ದಿಂದ ಸಂಸಾರದ ತನಕ ಹಬ್ಬಿದೆ. ಕುಂದಕುಂದರ 'ಸಮಯಸಾರ' ರತ್ನಾಕರನ ತಾತ್ವಿಕವಿಚಾರಕ್ಕೆ ಸ್ಫೂರ್ತಿಯನ್ನಿತ್ತಿದೆ. "ಸಮ್ಯಗ್ ದೃಷ್ಟಿಗೆ ಆಸ್ರವಬಂಧವಿಲ್ಲ ಆಸ್ರವದ ವಿರೋಧವಿದೆ"[23] ಸಮ್ಯಗ್ ದೃಷ್ಟಿಗೆ ಕರ್ಮಬಂಧವಿಲ್ಲವೆಂದು ಹೇಳಿದೆ. ಏಕೆಂದರೆ ಅವನಲ್ಲಿ ರಾಗ ದ್ವೇಷ, ಮೋಹಗಳಿಂದ ಕೂಡಿದ ಆಸ್ರವಭಾವವು ಇಲ್ಲದೇ ಇರು ವುದರಿಂದ ಮಿಥ್ಯಾತ್ವ ಮುಂತಾದವು ಸತ್ತೆಯಲ್ಲಿದ್ದರೂ ಅವು ಕರ್ಮ ವನ್ನು ಕಟ್ಟಲು ಶಕ್ತವಾಗುವುದಿಲ್ಲ."[24] ಸಮ್ಯಗ್‌ದೃಷ್ಟಿಯು ಯಾವ ಚೇತನ ಅಚೇತನದ್ರವ್ಯಗಳನ್ನು ಉಪಭೋಗಿಸುವನೋ ಅದೆಲ್ಲ ಕರ್ಮನಿರ್ಜರನಿಮಿತ್ತವಾಗಿಯೇ ಇರುವುದು"[25] ಭೇದವಿಜ್ಞಾನ ರತ್ನಾಕರನ ನವನೂತನ ಸೃಷ್ಟಿಯಲ್ಲವಾದರೂ ಅದನ್ನು ಪ್ರತಿಪಾದಿಸಿರುವ ಮನವೊಪ್ಪುವ ರೀತಿಮಾತ್ರ ರತ್ನಾಕರನದೇ.

ರತ್ನಾಕರನ ಕೀರ್ತಿ ಗಗನಚುಂಬಿಯಾದದು ಶೃಂಗಾರಪ್ರವಾಹ ದಿಂದ ಈತನ ಶೃಂಗಾರ ಕಲ್ಪನೆಯು ಕನಸಾಗದೆ ವಾಸ್ತವಿಕತೆಯು

---

23 ಣತ್ಥಿದು ಆಸವವಂಘೋ ಸಮಾದಿಟ್ಠಿಸ್ಸ ಆಸವಣಿರೋಹೋ ।
ಸಂತೆಪ್ರುನ್ವಣಿ ಬದ್ಧೆ ಜಾಣದಿ ಸೋತೆ ಅ ಬಂಧಂತೋ
||೧೬೬|| ಸ. ಸಾ.

24 ಏವೇಣ ಕಾರಣೇಣ ದುಸಮ್ಮಾದಿಟ್ಠೀ ಅಬಂಧಗೋಹೋದಿ ।
ಆಸವ ಭಾವಾಭಾವೇಣಪಚ್ಚಯಾ ಬಂಧಗಾ ಭಣಿದಾ
||೧೭೬|| ಸ. ಸಾ.

25 ಉಪಭೋಗ ಮಿಂದಿಯೇ ಹಿಂದವ್ವಾಣ ಚೇದಣಾಣ ಮಿದರಾಣಂ ।
ಜಂಕುಣದಿ ಸಮ್ಮದಿಟ್ಠೀತಂ ಸವ್ವಂ ಣಿಜ್ಜರಣಿಮಿತ್ತಂ
||೧೯೩|| ಸ. ಸಾ.

ಒಪ್ಪವನ್ನು ಪಡೆದು ರಾರಾಜಿಸಲು ಭೈರವರಸಕನ್ಯೆಯ ಸ್ಪರ್ಶನವೂ ಕಾರಣವಿರಬಹುದು. ರತ್ನಾಕರನ ಸ್ಫೂರ್ತಿ ಸೆಲೆಯೊಡೆದು ಚಿಮ್ಮಿ ಬರಲು ಈ ಕನ್ಯಾಮಣಿಯ ರಸಚುಂಬನ ಬೇಕಿತ್ತೋ ಏನೊ.

ಮುಡುಳಿದ ಪಾದರಿಯಂತೆ ನೀಚಸತಿಯರ । ವಿರಚಿಸಿತಿಲ್ಲ ಸಿಂಗರಕೆ ॥
ಭರತ ಚಕ್ರಿಯು ಪೇಳ್ದಿನವರ ಪೆಂಡಿರ ಪೇಳ್ದೆ । ಸ್ಮರಿಸಿದೆಲ್ಲರ್ಗೆ ಪುಣ್ಯ ॥೯೭॥ †

ಶೃಂಗಾರಕಾಗಿ ಕಷ್ಟರ ಕಥೆಗೇಳ್ದು ಜ । ನಂಗಳು ಕೆಡಬೇಡವೆಂದು ॥
ಅಂಗಸುಖಿಯು ಮೋಕ್ಷಸುಖಿಯು ಕಾವ್ಯವಿಷ್ಟು । ಶೃಂಗಾರಕಟ್ಟಿ ಪೇಳಿದೆನು ॥೯೮॥ †

ಪಾವನಚರಿತೆಯರ ಶೀಲಸಾಗರವಲ್ಲೇಳುವ ದಿವ್ಯ ಶೃಂಗಾರವನ್ನು ರತ್ನಾಕರ ಮೈಯುಬ್ಬಿ ಬಣ್ಣಿಸಿರುವನು. ಕೆಲವೊಮ್ಮೆ ರಸಾವೇಶಗೊಂಡು ಅತಿಯಾಯಿತೇನೋ ಎನ್ನುವತನಕ ಬಿತ್ತರಿಸಿರುವುದೂ ಉಂಟು. ಭವ್ಯಶೃಂಗಾರ ತುಸ ಹೆಚ್ಚಾದರೇನಂತೆ. ರಾಗರಸಿಕತೆಯೇ ವೀತರಾಗರಸಿಕತೆಯನ್ನು ಕರೆದು ಹಸೆಮಣೆ ಹಾಕುವ ಅಲೌಕಿಕತೆಯನ್ನು ಕಂಡರೆ ಭರತೇಶನ ಜೀವನದಲ್ಲಿ ಕಾಣಬಹುದು ಇಲ್ಲವೆ ರತ್ನಾಕರನ ರಸಲೋಕದಲ್ಲಿ ಕಾಣಬೇಕು.

ಉಪ್ಪರಿಗೆ ಸಂಧಿಯಲ್ಲಿ ನಾನಾ ಬಣ್ಣದ ಬೆಡಗುಗಾತಿಯರನ್ನು ಕನ್ನಡ ಕಲೆಯ ಕಿರಣರಾಜಿಯಲ್ಲಿ ಈ ಶೃಂಗಾರ ಕವಿ ಸಿಂಗರಿಸಿರುವನು. ಇಲ್ಲಿ ಬರುವ ಲೋಲಾಕ್ಷಿಯರು ನಡೆದಾಗ ನರ್ತನ, ಇಲ್ಲಿಯ ಕನ್ನೆಯರು ಬಾಯ್ದೆರೆದಾಗ ಕಾವ್ಯ! ವೀಣೆಯನ್ನು ಅಪ್ಪಿದಂತೆ ಭರತೇಶ ಕುಸುಮಾಜಿಯನ್ನಪ್ಪುವ ರಸಸನ್ನಿವೇಶದಲ್ಲಿ, ತಂಗಾಳಿ ಹೂತೋಟವನ್ನು ಹೊಕ್ಕು ನಲಿವಂತೆ ಅನು-

† ಭ. ವೈ. ಸಂ. ೮೦.

ರೂಪ ದಂಪತಿಗಳು ಅಂಗವಂಗವ ಸೋಂಕಿ ಸುಖಾಂಗವಡೆದ ಪ್ರಣಯ ಲೋಕದಲ್ಲಿ ರತ್ನಾಕರ ಸಂಭೋಗ ಶೃಂಗಾರವನ್ನು ಹದವರಿತು ಚಿತ್ರಿಸಿರುವನು.

ಪೂರ್ವ ನಾಟಕ ಸಂಧಿಯಲ್ಲಿ ಕಾಮೋನ್ಮಾದದಿಂದ ಮೈದುಂಬಿದ ಬೆಲೆವೆಣ್ಣುಗಳಿಗೆ ಅಂಗಜಾಗಮಸಿದ್ಧನಾದ ಭರತೇಶ ಉಂಗುಷ್ಟ ಬಹುಮಾನವಿತ್ತು ಅವರ ಉನ್ಮಾದವನ್ನಿಳಿಸುವ ವಿಚಿತ್ರಸನ್ನಿವೇಶ ಸೃಷ್ಟಿಯಾಗಿದೆ. "ಇಲ್ಲಿ ವಿಮರ್ಶಕ ಉದಾರ ದೃಷ್ಟಿಯನ್ನು ಅನುಸರಿಸುವುದು ಮೇಲು ........ ರತ್ನಾಕರನ ಅಧ್ಯಾತ್ಮದೃಷ್ಟಿಗೆ ಜೀವನ್ಮುಕ್ತಿಯಾದ ವ್ಯಕ್ತಿಯೊಬ್ಬನ ಇಹದ ನಡವಳಿಕೆ ವಿಷಯವಾಗಿ ಇದು ಅಶ್ಲೀಲವಲ್ಲ........ಔದಾಸೀನ್ಯ, ತೀವ್ರ ವಿರಕ್ತಿ, ತಾಟಸ್ಥ್ಯ ಇವು ಮನೋವಿಕಾರವನ್ನುಂಟು ಮಾಡುವುದಿಲ್ಲ. ಅನಾಸಕ್ತಿ (Psychicdistance) ಯಿದ್ದರೆ ಅಶ್ಲೀಲತೆಗೆಡೆಯಿಲ್ಲ." [26]

ವಿಕ್ರಿಯಾಂಗವಾದ [27] ಭರತೇಶ ತೊಂಬತ್ತಾರು ಸಹಸ್ರಮಂದಿ ಮನದನ್ನೆಯರಲ್ಲಿ ಎಲ್ಲರಬಳಿಯೂ ಒಬ್ಬಳಿಗೆ ಒಬ್ಬನಾಗಿ ತಾನಿದ್ದು ಎಲ್ಲರನ್ನೂ ತನ್ನಂಕಿತದಲ್ಲಿಟ್ಟುಕೊಂಡು ಬ್ರಹ್ಮಾದ್ವೈತ ನಾಟ್ಯವನ್ನಾಡಿದ ರಾಸಲೀಲಾ ಪ್ರಸಂಗದಲ್ಲಿ ಕವಿತಾವಿಕ್ರಿಯಾಂಗನಾದ ರತ್ನಾಕರ ಬಹುರೂಪಿಣೀ ವಿದ್ಯೆಯ ಅದ್ಭುತ ಪವಾಡವನು.

---

26 ಶ್ರೀ ಡಿ. ಎಲ್. ನರಸಿಂಹಾಚಾರ್ಯರು ೨೦–೧–೧೯೫೯ ರಂದು ನನಗೆ ಬರೆದ ಪತ್ರದಿಂದ ಉದ್ಧರಿಸಿರುವೆನು.

27 ವಿಕ್ರಿಯಾಂಗ : ದೇವತೆಗಳಿಗೂ ನಾರಕಿಗಳಿಗೂ ಚಕ್ರವರ್ತಿಗಳಿಗೂ ವೈಕ್ರಿಯಕ ದೇಹವಿರುತ್ತದೆ. ಒಮ್ಮೆಗೆ ಎಷ್ಟು ರೂಪವನ್ನಾದರೂ ಇವರು ಧರಿಸಬಹುದು.

ಮೆರೆದಿರುವನು ; ಈ ಸಂದರ್ಭದಲ್ಲಿ ಕಾವ್ಯಕನ್ನೆ ಗರಿಗೆದರಿ ನವಿಲ ನಾಟ್ಯವಾಡುವಂತೆ ಮಾಡಿ ಕೃತಕೃತ್ಯನಾಗಿರುವನು.

ಪ್ರಣಯೋನ್ಮಾದದಿಂದ ತಳಮಳಗೊಳ್ಳುವ ಪದ್ಮಿನಿಯಿದಿರು ಚಕ್ರೇಶ ಯೋಗದ ಮೋಡಿ ಹಾಕಿದಾಗ ಆಕೆ ಕಾತರದ ಕಾರ್ಮೋಡದಲ್ಲಿ ಕಳವಳಿಸುವ ವಿದ್ಯುಲ್ಲತೆಯಂತೆ ಆಡುವುದನ್ನು ಅಂಗಜಾಗಮಸಿದ್ಧನಾದ ರತ್ನಾಕರನೇ ವಿವರಿಸಬೇಕು.

ನೊಸಲೊಳು ನೊಸಲ ತಾಟಿಸುತ ಮುಂಡಾಡಿ ಚುಂ | ಬಿಸುವಳು
ಕೊರಳನಪ್ಪುವಳು ||
ಸಸಿನೆ ಕಣ್ದೆರೆದೊಲ್ದು ನೋಡೆನ್ನ ಪ್ರಾಣದ | ಬೆಸುಗೆಕಾರ
ಯೆಂಬಳೊಡನೆ ||೫೧||*
ನೀಡುವಳೆಲೆಯ ಘಳಿಗೆಯು ಬಾಯ್ದೆರೆಗೆ ಪ | ಲ್ಗಾಡಿ ಕೊಂಬನು
ಕೊಳ್ಳದದನು ||
ಕಾಡದಿರಿನಿಯ ನೀನೆನ್ನನೆನುತಲಾಗ | ಬೇಡಿಕೊಂಬಳು
ಲಲ್ಲೆಗರೆದು ||೫೨||*
ಪದ್ಮಿಯು ಪ್ರಾಣನೊಡೆಯನೆ ಕಣ್ದೆರೆ ಬೇಗ | ಪದ್ಮಿಯುಸಿರೆಯೆ
ಮಾತಾಡು ||
ಪದ್ಮಿನಿಗರ್ತಿದೋರೆಂದು ಮುದ್ದಿಸಿ ಮುಖ | ಪದ್ಮವ ತಡವಿ
ನೋಡುವಳು ||೫೫||*
ಗಿಳಿಯಂತೆ ನುಡಿವಳು ಲತೆಯಂತೆ ತಬ್ಬುವ | ಳಿಳಿದು ಪರಿವ
ಹೊಳೆಯಂತೆ ||
ಗಳರವ ತೋರುವಳಪ್ಪಿ ತೂಗಾಡಿ ಕಂ | ಗಳ ತೆರೆಯೆಂದು
ಕಾಡುವಳು ||೫೬||*

ಪದ್ಮಿನಿ ಕ್ಷಾತ್ರಪಣಾಮಣಿ! ಆವರೆ ಈಗ ಪ್ರೇಮೋನ್ಮತ್ತತೆಯಿಂದ ಪ್ರಣಯ ಭಿಕ್ಷೆಯನ್ನು ಯಾಚಿಸುತ್ತಿರುವ ಕನ್ಯಾಮಣಿ! ಪ್ರೇಮಗೀತೆಯನ್ನು ಹಾಡುತ್ತಾ ಆಗಾಗ ಚುಂಬನದ ಬಿರುಮಳೆ

---

*ಭ. ವೈ, ಸಂ. ೧೫.

ಯನ್ನು ಸುರಿಸುತ್ತ ತನ್ನ ಪ್ರಾಣೇಶನನ್ನು ಯೋಗನಿದ್ರೆಯಿಂದ ಎಚ್ಚರಗೊಳಿಸುತ್ತಿರುವಳು. ಈಕೆ ಮುನಿದಾಗ ಅಶನಿ, ಮೆಚ್ಚಿದಾಗ ಕಾಮನಬಿಲ್ಲಿನ ರಂಗುರಂಗಾದ ಮಿಣಿ!

ಅಪೂರ್ವ ದಂಪತಿಗಳ ಪ್ರಣಯಲೀಲೆಯೆಂದರೆ ರತ್ನಾಕರನ ದೃಷ್ಟಿಯಲ್ಲಿ ಬ್ರಹ್ಮರ್ಷಿಗಳ ಪೀಳಿಗೆಯನ್ನು ವಿರಚಿಸುವುದಕ್ಕೋಸ್ಕರ ಅನಿವಾರ್ಯವಾದ ಸುರತಯಜ್ಞ![28] ಕುಸುಮಾಜಿ ಮತ್ತು ಭರತೇಶ ಇವರ ಸಂಭೋಗಶೃಂಗಾರ ಮಲ್ಲಿಗೆಯ ಕಂಪಿನಂತೆ ಹಿತವಾಗಿ ಮಿತವಾಗಿದೆ. ಚಕ್ರೇಶನ ರಾಸಲೀಲಾ ಪ್ರಸಂಗ ಹೋಮಕುಂಡದಲ್ಲಿ ಧೂಪವನ್ನು ಸುರಿದು ಸುಗಂಧದ ಹೊಗೆ ಹಾಕಿ ಲಕ್ಷದೀಪೋತ್ಸವ ಮಾಡಿದಂತೆ ವಿಜೃಂಭಿಸಿದೆ. ಸ್ತ್ರೀರತ್ನ ಸಂಭೋಗಸಂಧಿಯಲ್ಲಾದರೋ ಶೃಂಗಾರ ಮಲೆನಾಡಿನ ಮುಂಗಾರಿನಂತೆ ಆರ್ಭಟಿಸುವುದರಜೊತೆಗೆ ಆಗಾಗ ವಾಚ್ಯಕಲೆಂಬ ಆಲಿಕಲ್ಲೂ ರಪರಪ ಬೀಳುವುದನ್ನು ಓದುಗರು ಸಹಿಸಬೇಕಾಗುವುದು.

ಹಾಸ್ಯರಸವನ್ನೂ ರತ್ನಾಕರ ಸಮೃದ್ಧಿಯಾಗಿ ಕರುಣಿಸಿರುವನು. ಭರತೇಶ ನಕ್ಕು ನಗಿಸುವ ರಾಗರಸಿಕನಾದರೆ ಆತನ ಮಂದಸ್ಮಿತೆಯರಾದ ಮನದನ್ನೆಯರೂ ಆಮೋದದಲ್ಲಿ ಎಂತೋ ವಿನೋದದಲ್ಲೂ ಅಂತೆ. ಗಂಡ ಚಮತ್ಕಾರೋಕ್ತಿಯಾಡಿದಾಗ ಆ ವನಿತೆಯರು ಚತುರೋಕ್ತಿಯಿಂದ ಉತ್ತರಕೊಟ್ಟು ಹಾಸ್ಯದ ಚಟಾಕಿ ಹಾರಿಸುವರು. ಭರತೇಶ ಹಾಗು ಮಕರಂದಾಜಿಯ ಸರಸವನ್ನು ವಿವರಿಸಲು ಒಂದು ಸಂಧಿಯೇ ಮೀಸಲಾಗಿದೆ. ತಾಂಡವ ವಿನಯ

---

28 ಯೋಚಿಸಿ ಯಿನರವರೆಂದಾಡಲೇಕೆ ಮ | ರೀಚಿ ಯೊಬ್ಬನು
ಹೊರತಾಗಿ ||
ಶ್ರೀಚಕ್ರಧರಪುತ್ರನಸು ಜಾತರೆಲ್ಲರು | ಪ್ರಾಚುರ್ಯಮುಕ್ತಿ
ಗೆಯ್ದಿದರು || ಭ. ವೈ. ೮೦

ಸಂಧಿಯಲ್ಲಿ ಕಾಲ್ಗೆರೆದು ಕಾದಾಟಕ್ಕೆ ನಿಂತು ಚಕ್ರೇಶನಿದಿರು ಕಾಸೆಕಟ್ಟಿ ನಿಂತ ಪದ್ಮಿನಿ ಪಾರ್ಥಿವ ಫಣಾಮಣಿಯಾಗಿ ಕೋಲಾಹಲವೆಸಗುವಳು. ಸಮಾಜಸುಧಾರಕನಾದ ಹದಿನಾರನೆಯ ಮನುವಾದ ಭರತೇಶ ಕಕ್ಕಾಬಿಕ್ಕಿಯಾಗುವನು! ಒಂದುಕಡೆ ಕಾಸೆಗಟ್ಟಿ ಕಾದಾಟಕ್ಕೆ ನಿಂತ ಪದ್ಮಿನಿ, ಇನ್ನೊಂದುಕಡೆ ಬಹುಮಟ್ಟಿಗೆ ಮೆತ್ತಗಾಗಿ ಇನ್ನಾವ ಮಾರ್ಗವೂ ತೋಚದೆ ಮುಸುಕಿಟ್ಟು ಮಲಗಿ ಹೊಸ ಮೋಡಿ ಹಾಕುವ ಭರತೇಶ, ಮತ್ತೊಂದು ಕಡೆ ಉಭಯಪಕ್ಷಗಳಿಗೂ ಸಂದರ್ಭೋಚಿತವಾಗಿ ವಾಗ್ಬಾಣಗಳನ್ನು ಒದಗಿಸುತ್ತಿರುವ ನಿಷ್ಪಕ್ಷಪಾತಿಯಾದ ಕಿತಾಪತಿ ರತ್ನಾಕರ! ಇಂಥ ಮಹಾದೃಶ್ಯ ಯುಗಕ್ಕೊಮ್ಮೆ ದೊರೆತರು ನಾವು ಧನ್ಯರೇ!

ದಕ್ಷಿಣನಾಯಕ, ಪಂಡಿತೆ, ಮಧುವಾಣಿ, ಗಂಗಾದೇವಿ ಸಿಂಧೂದೇವಿಯರು ಸಂದರ್ಭೋಚಿತವಾಗಿ ಭರತೇಶನ ಬೃಹದ್‌ಸಂಸಾರದಲ್ಲಿ ರಾಗರಸದ ರಂಗೇರಿಸಿ ಕೃತಕೃತ್ಯರಾಗಿರುವರು. ಇವರೆಲ್ಲ ಆಮೋದದ ಜೇನಮಳೆಯನ್ನು ಕರೆದು ಭರತೇಶ ವೈಭವದಲ್ಲಿ ಚರಮದೇಹಿಯ ಮರ್ಮವನ್ನರಿತು ತಾಳ ಹಾಕಿರುವರು!

ಭರತೇಶವೈಭವ ಸಾವಿಲ್ಲದ ಕೃತಿಯಾದರೂ ನೋವಿಲ್ಲದ ಕೃತಿಯೇನಲ್ಲ. ಆಗಾಗ ಬೀಸುತ್ತಿದ್ದ ವೈರಾಗ್ಯದ ಚಂಡಮಾರುತದ ಹೊಡೆತಕ್ಕೆ ಸಿಕ್ಕಿ ಭರತೇಶನ ಸಂಸಾರವೃಕ್ಷದಿಂದ ಬಂಧುಬಳಗ ಜೊಂಪೆಜೊಂಪೆಯಾಗಿ ಕಳಚಿ ಹೋಗಿ ಕರುಣಾಜನಕ ವಾತಾವರಣವೇರ್ಪಡುವುದನ್ನು ನಾವು ಯೋಗವಿಜಯ ಹಾಗು ಮುಂದಿನ ವಿಜಯಗಳ ತುಂಬ ನೋಡಬಹುದು. ತನ್ನ ತಾಯಿ ಆನುವು ಆಪತ್ತುಗಳಿಲ್ಲದೆ ಸಮವಸರಣದಲ್ಲೇ ವೈರಾಗ್ಯದ ಹೊಳೆಯಲ್ಲಿ ಕೊಚ್ಚಿಹೋಗುವಾಗ ಷಟ್‌ಖಂಡಾಧಿಪತಿ ನಿಸ್ಸಹಾಯ

ನಾಗಿ ನೋಡಿಕೊಂಡು ಸುಮ್ಮನಿರಬೇಕಾಗುವುದು. ಚಕ್ರೇಶನ ನೂರು ಜನ ಮಕ್ಕಳು ಆಟವಾಡಲೆಂದು ಹೋದವರು ಆಟದ ಬೈಲಲ್ಲೇ ಸಂಸಾರ ನಾಟಕಕ್ಕೆ ಹೇಸಿ ತಮ್ಮಜ್ಜನ ಮರೆಹೊಕ್ಕು ದಿಗಂಬರ ದೀಕ್ಷೆಗಾಗಿ ಅಂಗಲಾಚುವ ದೃಶ್ಯ ಓದುಗರ ಕಣ್ಣಲ್ಲಿ ನೀರನ್ನು ತಾರದಿರದು.

ಸಂದುದನಾದಿಯಾಗಿರೆ ಕಾಲವದರೊಳು | ಬಂದೆವು ಬಲುಭವದೊಳಗೆ ||
ನೊಂದೆವು ನೊಂದವರೆಮ್ಮ ಹುಯ್ಯಲಸಿಂತು | ತಂದೆವು ನಿನಗೆ
ಕೃಪಾಳು ||೬೩|| *

ಕಾಲನಸಟ್ಟೆ ಕರ್ಮಪಮಟ್ಟೆ ದ ಷ್ಕರ್ಮ | ಜಾಲವೆಲ್ಲವ ಹ ಟ್ಟಗಟ್ಟ ||
ಘಾಳಿಮಾಡುವೆವು ಮುಕ್ತಿಗೆ ಜಿನದೀಕ್ಷೆಯ | ಪಾಲಿಸಬೇಕೆಮ
ಗರುಹಾ ||೬೫|| *

ಅಭಿಮನ್ಯು ಚಿತ್ರಬಿಂಬದ ಕೋಟೆಯನ್ನು ಭೇದಿಸಲು ಧರ್ಮರಾಯನ ಬಳಿ ಬಂದು ವೀರಾಟ್ಟಹಾಸವನ್ನೆಸಗಿ ಅನುಮತಿ ಬೇಡುವಂತೆ ಈ ಹಸುಳೆಗಳೂ ಕೂಡ ಪ್ರಥಮ ಜಿನೇಶನ ಪಾದ ಮೂಲದಲ್ಲಿ ಭಕ್ತಿಯಿಂದ ನಿಂದು ಕರ್ಮಗಳೊಡನೆ ಖಾಡಾಖಾಡಿ ಯಾಡಲು ಅನುಮತಿ ಬೇಡುತ್ತಿರುವರು.

ಮುಗಿದು ನೀಡಿದ ತೋಳು ನಿಮಿರಿ ಹಾಸಿದ ಕಾಲು | ಮಿಗೆ ಭೂಮಿ
ಮುಟ್ಟಿದ ನೊಸಲು ||
ಜಗದೀಶನಿದಿರೊಳಿದ್ದರು ಮಿಸುಕದೆ ಹೊನ್ನ | ಹೊಗರ ಪುತ್ಥಳಿ
ಗಳೆಂಬಂತೆ ||೭೧||*

ಈ ಹಸುಳೆಗಳು ದೀಕ್ಷೆ ಬೇಡುವಾಗ ತೋರಿದ ಗಾಢವಾದ ಭಕ್ತಿ ಓದುಗರ ಕಣ್ಣಿಗೆ ಕಟ್ಟದಿರದು. ಇಂಥ ಮನೋಜ್ಞ ದೃಶ್ಯಗಳನ್ನು ಮತ್ತೊಂದು ಕಡೆ ಕಂಡೇವೆ? ಅಂತು ನೂರುಜನ ಹಸುಳೆಗಳಿಗೆಲ್ಲ ಒಂದೇ ಬಾರಿ ಆದಿದೇವ ದೀಕ್ಷೆಯಿತ್ತನು. ಈ

* ಭ. ವೈ. ಸಂ. ೭೦.

ಸುದ್ದಿ ಕೇಳಿದಾಗ ಭರತೇಶನೆದೆಗೆ ಬಾಳ ಬೀಸಿದಂತಾಯಿತು! ರಾಣಿವಾಸದಲ್ಲಿ ಭೂಕಂಪವಾದಂತೆ ಮಹಿಳಾಲೋಕ ಕಂಪಾಯಮಾನವಾಗಿ ದೊಪ್ಪನುರುಳಿತು!

ಭರತೇಶ ನಿರ್ವೇಗಗೊಂಡಾಗ ಭೂಗೋಳಕ್ಕೆ ಬೇನೆ ಬಂದಂತಾಗಿ ಆತ ನಿರ್ವಾಣಗೊಂಡಾಗ ವಿಶ್ವಚೇತನವೇ ಮುಳುಗಿಹೋದಂತಾಯಿತು! ಬ್ರಹ್ಮಾಂಡಕ್ಕೆ ಬರಬಾರದ್ದು ಬಂದು ಚೇತನಾಚೇತವೆಲ್ಲ ಗೋಳ್ಗರೆಯುವಂಥ ಹೃದಯ ವಿದ್ರಾವಕ ದೃಶ್ಯವನ್ನು ಸೃಷ್ಟಿಸಿ ಚಕ್ರೇಶನ ನಿರ್ವಾಣ ಕಲ್ಯಾಣಕ್ಕೆ ರತ್ನಾಕರ ಕನ್ನಡದ ಕಾಣಿಕೆಯನ್ನರ್ಪಿಸಿರುವನು!

ರತ್ನಾಕರ ನಿರಂಜನಸ್ತುತಿಯನ್ನು ಹಾಡುವಾಗ ಭಕ್ತಿಯಿಂದ ಮೈಮರೆತುಬಿಡುವನು; ಕೇಳುಗರನ್ನೂ ಮೈಮರೆಸಿಬಿಡುವನು.

ಪರಮಪರಂಜ್ಯೋತಿಕೋಟಿಚಂದ್ರಾದಿತ್ಯ | ಕಿರಣಸುಜ್ಞಾನಪ್ರಕಾಶಾ ||
ಸುರರಮಕುಟಮಣಿರಂಜಿತಚರಣಾಬ್ಜ | ಶರಣಾಗುಪ್ರಥಮಜಿನೇಶಾ || †
ಬರೆಯಾಬಾರದ ತಿದ್ದಬಾರದ ಕಡೆದರೆ | ದೊರೆಯಬಾರದ ರೂಪಿನಭವಾ ||
ಬರೆದುಬಚ್ಚಣಿಸಿದಂತೆನ್ನೆದೆಯೊಳಗಿರು | ಗುರುವೆ ಚಿದಂಬರಪುರುಷಾ ||*
||೧೨||

ತಿಳಿವೆಳಗಿನ ತೀರ್ಥರೂಪನೆ ತಿಂಗಳ | ಬೆಳಗಿನೊಳಾದಪುತ್ತಳಿಯೆ ||
ತಳುಮಾಡದೆನಗೆ ಸನ್ಮತಿದೋರು ಸುಜ್ಞಾನ | ನಿಳಯಾನಿರಂಜನಸಿದ್ಧಾ ||*
ಸಿರಿಗೇನುಕಡಿಮೆಸಿಂಗರಕೇನು ಕಡಿಮೆ ಸೌಂ | ದರಕೇನುಕಡಿಮೆನೀನಿರಲು ||
ಎರವಿಲ್ಲದೆನ್ನಂತರಂಗದೊಳಿರು ಪ್ರಬಂ | ಧುರನೆ ಚಿದಂಬರಪುರುಷಾ ||*
||೯೪||

ಯೋಗವಾಗಲಿ ಭೋಗವಾಗಲಿ ನಿನ್ನ ಸಂ | ಯೋಗವಾದರೆ ತಾನೆಮುಕ್ತಿ ||
ಶ್ರೀಗುರುನಾಥ ನನ್ನೆದೆಯೊಳಿರಲೆ ಮಹಾ | ಭೋಗಿ ಚಿದಂಬರಪುರುಷಾ *
||೯೭||

---

† ಭ.ವೈ. ಸಂ. ೧; * ಭ.ವೈ. ಸಂ. ೪; * ಭ.ವೈ,ಸಂ. ೭೦; * ಭ.ವೈ,ಸಂ. ೭೨; * ಭ.ವೈ,ಸಂ. ೬೨.

"ಮೀನು ನೀರಿನಲ್ಲಿ ಈಜುವಂತೆಯೂ, ಹಕ್ಕಿ ಗಾಳಿಯಲ್ಲಿ ಹಾರುವಂತೆಯೂ ಪರಮಾತ್ಮ ಭಾವನೆಯಲ್ಲಿ ರತ್ನಾಕರ ಓಲಾಡುವನು. ಈ ಶಕ್ತಿಯಲ್ಲಿ ಕವಿಯನ್ನು ಮಹಾಕವಿ ರವೀಂದ್ರನಾಥ ಠಾಕೂರರಿಗೆ ಹೋಲಿಸಬಹುದು. ರತ್ನಾಕರನ ಹಲವು ಉದಾತ್ತ ಭಾವನೆಗಳು ಗೀತಾಂಜಲಿಯ ಭಾವನೆಗಳಷ್ಟೇ ದಿವ್ಯವಾಗಿವೆ."[29]

ಭರತೇಶವೈಭವದ ರತ್ನಾಕರ ವೇಣುಗಾನವಿಶಾರದನೇಹೊರತು ಪಾಂಚಜನ್ಯಪ್ರಿಯನಲ್ಲ 'ಭವ್ಯಾವಳಿಗಾಗಿ ಹಾಡುತ್ತ ಸುಮಧುರವಾದ ಆತನ ಕಂಠದಲ್ಲಿ, ಹಾಗು ಎಲ್ಲೆಲ್ಲೂ ಒಳ್ಳೆಯದನ್ನೇ ನೋಡುವ ಆತನ ಅಂತರಂಗದಲ್ಲಿ ಎದೆ ನಡುಗಿಸುವಂಥ ವೀರ ರೌದ್ರ ಭಯಾನಕ ರಸಗಳು ಉಕ್ಕಲು ಅವಕಾಶವೇ ಇಲ್ಲ. ಪರಿಸ್ಥಿತಿಯ ಒತ್ತಡಕ್ಕೆ ಸಿಕ್ಕಿ ತೀಕ್ಷ್ಣವಾಗಿ ಹೃದಯದ ಹೊಯ್ದಾಟವೆದ್ದಾಗ ಈ ರತ್ನಾಕರನೂ ರತ್ನಾಕರ ಶತಕದಲ್ಲಿ ಪಾಂಚಜನ್ಯ ಮೊಳಗುವುದನ್ನು ಯಾರುಬೇಕಾದರೂ ಕೇಳಬಹುದು; ಗೋಪಿಯರನಡುವೆ ಶೃಂಗಾರದ ತಂಗಾಳಿಯಲ್ಲಿ ಶ್ರೀಕೃಷ್ಣ ವೇಣುಗಾನಪ್ರಿಯನಾದರೂ, ಕುರುಕ್ಷೇತ್ರದಲ್ಲಿ ಪಾಂಚಜನ್ಯ ಮೊಳಗಿ ಲೋಕವನ್ನು ಬುಡಮೇಲುಮಾಡಿದನಲ್ಲ! "ಹಡಗಿನಲ್ಲಿ ದಾಟಬೇಕಾದ ಸಾಗರವನ್ನು ಹರಿಗೋಲಿನಲ್ಲಿ ದಾಟಲು ಹೊರಟಂತಿದೆ ಈ ಸಾಹಸ........ಅಂದರೆ ಯುದ್ಧ ಮೊದಲಾದ ವೀರರೌದ್ರಾದಿ ರಸಗಳನ್ನು ಚಿತ್ರಿಸುವಾಗ ಈ ರೀತಿ ಅಥವಾ ವಿಧಾನ ಹೊತ್ತ ಹೊರೆಯು ಗುರುಭಾರಕ್ಕೆ ಕುಸಿಯುವಂತೆ ಕಾಣುತ್ತದೆ'' ತೀಕ್ಷ್ಣವಾದ ಭಾವದ ರಭಸವನ್ನು ಸಾಂಗತ್ಯ ಹಾಗು ರತ್ನಾಕರನ ಭಾಷೆ ಹೊರಲಾರದೆಂದು ಹಿರಿಯರು ಹೇಳುವರು. ಆದರೆ ರತ್ನಾಕರನ ಮನೋಭೂಮಿಕೆಯಲ್ಲೇ ಭರತೇಶ

---

[29] ಶ್ರೀ. ಉಗ್ರಾಣ ಮಂಗೇಶರಾಯರು, ಭ. ವೈ. ಪೀ. XXVIII

ವೈಭವದ ರಚನಾಕಾಲದಲ್ಲಿ ವೀರರೌದ್ರ ಭಯಾನಕ ರಸಗಳು ಚಿಮ್ಮಿಬರಲು ಅವಕಾಶ ಸಾಲದು.

**ನಿಡುಬಿಲ್ಲ ರಥದ ಮೇಲೂರಿ ದಕ್ಷಿಣದೊಂದು । ತೊಡೆ ಸೋಂಕಿ ಬಾಗಿಸಿ ಹೆದೆಯಾ ।**
**ಎಡಗೈಯೊಳೇರಿಸಿ ನೀವಿ ಜೇವೊಡೆದನು । ಸಿಡಿಲ ವೀಣೆಯು ಮುಟ್ಟಿದಂತೆ ॥ 30**

**ಸಿಂಜಿನಿಯೊಳಗೆ ಬಾಣವಿಟ್ಟನು ಪರಮ ನಿ । ರಂಜನಸಿದ್ಧನ ನೆನೆದು ॥**
**ಮಂಜುಳಾತ್ಮ ರಾಮ ಕರ್ಮವ ಗುರಿಗಾಣ್ಬ । ರಂಜನೆಯೊಳು ಗುರಿಗಂಡಾ ॥೩೩॥ ***

ರತ್ನಾಕರನ ವೀರರೌದ್ರರಸಗಳಲ್ಲೂ ಶೃಂಗಾರದ ಹಾಗು ಹಂಸಕಲೆಯ ತೆರೆಯೆದ್ದು ಕೆಂಡದಮೇಲೆ ತಣ್ಣೀರು ಎರಚಿದಂತಾಗುವುದನ್ನು ನಾವು ಅಲ್ಲಗಳೆಯಲಾದೀತೆ? ಕವಿಯ ಆವೇಶಕ್ಕನುಗುಣವಾಗಿ ಭಾಷೆ ಮತ್ತು ಛಂದಸ್ಸು ರೂಪಗೊಳ್ಳುವುದು.

ಪಾತ್ರ ಚಿತ್ರಣದಲ್ಲಿ ರತ್ನಾಕರ ಅಪೂರ್ವವಾದ ನೈಪುಣ್ಯವನ್ನು ತೋರಿರುವನು. ಭರತೇಶವೈಭವವೆಂಬ ಕಾವ್ಯಾಂಬರವಲ್ಲಿ ಚಕ್ರೇಶನೇ ಪರಿಪೂರ್ಣ ಸುಧಾಕರನಾಗಿ ತೊಳಗಿದರೂ ಉಳಿದ ಪಾತ್ರಗಳಲ್ಲಿ ಯಾವುದೊಂದೂ ವ್ಯಕ್ತಿತ್ವ ಹೀನವಾಗದಂತೆ ಮಹಾಕವಿ ಎಚ್ಚರವಹಿಸಿರುವನು. ಕಿರುತಾರೆಗಳು ತಮಗೆತಾವೇ ತೊಳಗಿ ಸುಧಾಕರನ ಬೆಳದಿಂಗಳಲ್ಲಿ ತಮ್ಮ ಎಳದಿಂಗಳನ್ನು ಬೆರಸಿ ಸಂತೃಪ್ತವಾಗುವಂತೆ ಇಲ್ಲಿಯ ಪಾತ್ರಗಳೆಲ್ಲ ಪೂರ್ಣಚಕ್ರಿಯ ಪರಿಪೂರ್ಣತೆಗೆ ಪೋಷಕವಾಗಿ ಬಂದು ಪಾವನಗೊಂಡಿವೆ.

---

30 ಶ್ರೀ ಕುವೆಂಪು, ಭ. ವೈ. ಸ. ಮು. IV

* ಭ. ವೈ. ಸಂ.೨೪.

ಮುಕ್ತರೆಲ್ಲರು ಸರಿಯಹುದಾವರೇನಾತ್ಮ। ಶಕ್ತಿಯ ನರಿದಿಲ್ಲಿ ಮೊದಲು।
ವ್ಯಕ್ತಭೋಗದೊಳಿರ್ದು ಕ್ಷಣಕೆ ಮುಕ್ತಿಗೆ ಸಂದ। ಯುಕ್ತಿಗೆನ್ನೆದೆ
ಸೂರೆಹೋಯ್ತು ||೯೨|| *

ಅರಸಿಯರಿಬ್ಬರನಾಳ್ದಯ್ಯ ಸಾವಿರ। ವರುಷ ತಪಸುಮಾಡಿ ಗೆಲ್ದಾ ||
ಅರರೆ ಲಕ್ಷಾಂಗನೆಯರನಾಳ್ದ ಕ್ಷಣದೊಳೀ। ಪರಿಯಾದುದಿದು
ಚೋದ್ಯವಲ್ತೆ ||೯೩|| *

ಚಕ್ರೇಶನಮೇಲೆ ತನಗಿರುವ ಪಕ್ಷಪಾತವನ್ನು ರತ್ನಾಕರ ತಾನೇ ಒಪ್ಪಿಕೊಂಡಿರುವನು. ಭರತೇಶನ ಭವ್ಯವಾದ ಬಾಳ್ವೆಯಲ್ಲಿ ಈ ಕವಿ ಕುಂದಣಗಾರ ಭೇದವಿಜ್ಞಾನವನ್ನು ಬೆಸೆದಾಕ್ಷಣ ಚೆಂಬೊನ್ನ ಹೊಗರಿಗೆ ರನ್ನಗಾಂತಿಯನ್ನು ಎರೆದಂತಾಯಿತು! ಇಲ್ಲಿಯ ಭರತೇಶ ಉಂಡುಪವಾಸಿ, ಬಳಸಿ ಬ್ರಹ್ಮಚಾರಿ, ಭೂಮಂಡಲವಿದ್ದೂ ನಿಸ್ಸಂಗ, ಇವೆಲ್ಲಕ್ಕಿಂತ ಮಿಗಿಲಾಗಿ ಮಂಡೆ ಬೆಳಸಿ ಮನಬೋಳಾದ ತವಸಿಯಾಗಿ ಅಪ್ರತಿಮ ಭೇದವಿಜ್ಞಾನಿಯಾಗಿ ರಾರಾಜಿಸುತ್ತಿರುವನು! ಷಟ್‌ಖಂಡಾಧಿಪತಿಯಾದ ಭರತೇಶ ನಾನಾಕಲೆಗಳ ಕುಸುಮಚುಂಬನಕ್ಕೆ ಸಿಕ್ಕಿ ಸಂಸ್ಕಾರ ಸಂಪನ್ನನಾಗಿರುವನು. ರಾಗರಸಿಕತೆಯು ಜೋಕಾಲಿಯಮೇಲೆ ಕುಳಿತು ಲೀಲಾವಿನೋದದಲ್ಲಿ ತಲ್ಲೀನವಾದಂತೆ ಕಂಡರೂ ಜೋಕಾಲಿ ಜೋಪಾನವಾಗಿ ಮೇಲೇರಿದಾಗ ಈ ರಸಋಷಿಗೆ (ಭರತೇಶನಿಗೆ) ಮುಕುತಿ ವನಿತೆಯ ನಿರೀಕ್ಷಣಾಭಂಗಿ ಪಕ್ಕನೆ ಕಾಣದಿರದು! ಚಕ್ರೇಶ ಮುನಿಗಳಿದಿರು ನಿಧಿಗೆರಗುವ ಸೊಡರಂತೆ ಭಕ್ತಿಯ ಪುತ್ಥಳಿಯಾಗಿ ಕುಸಿದುಹೋಗುವನು. ಸೆಟೆದುನಿಂತ ಮಡದಿಯಿದಿರು ಮುಸುಕಿಟ್ಟು ಮಲಗಿ ಆಕೆಯ ತಾತ್ಕಾಲಿಕ ಕಠೋರತೆಯನ್ನು ಕರಗಿಸಿಬಿಡುವನು. ಸ್ವಾಭಿಮಾನಿಯಾದ

* ಭ. ವೈ. ಸಂ. ೮೦

ಭಾವನಂಟ ನಮಿರಾಜನನ್ನು ಕಂಡಾಗ ಚಕ್ರೇಶ ತನ್ನ ಪ್ರತಿಷ್ಠೆಯನ್ನು ಬದಿಗೊತ್ತಿ ಅವನನ್ನು ಹದಕ್ಕೆ ತರುವನು. ತನಗಾಗಿ ಕಾದು ವಿರಹತಾಪದಲ್ಲಿ ಬಸವಳಿದಿದ್ದ ಸುಭದ್ರೆಯನ್ನು, ಅವಳ ಅಣ್ಣನ ಇಷ್ಟಾನುಸಾರ ನಡಕೊಂಡು ಚಕ್ರೇಶ ವರಿಸಿ ಮಾನವೀಯತೆಗೆ ಮೆರಗಿಡುವುದರಜೊತೆಗೆ ಪ್ರೇಮಕ್ಕಾಗಿ ಸರ್ವತ್ಯಾಗವನ್ನೂ ಮಾಡಲು ಹಿಂದೆ ಮುಂದೆ ನೋಡಬಾರದೆಂಬುದನ್ನು ಮಾನವ ಲೋಕಕ್ಕೆ ಸಾರಿರುವನು. ತಿರುಗಿಬಿದ್ದ ತಮ್ಮನಮೇಲೆ ಖಡ್ಗವೆತ್ತದೆ ವಾತ್ಸಲ್ಯದ ಮಳೆಗರೆದು ಆತನಲ್ಲಿ ಸುಪ್ತವಾಗಿದ್ದ ಭ್ರಾತೃಪ್ರೇಮವನ್ನು ಎಚ್ಚರಗೊಳಿಸಿರುವನು. ತಾನೂ ಹಾಯಾಗಿದ್ದು ಲೋಕವನ್ನೆಲ್ಲ ಹಾಯಾಗಿರುವಂತೆ ಪ್ರೇರೇಪಿಸಿದ ಭರತೇಶನನ್ನು ರತ್ನಾಕರ ಹದಿನಾರನೆಯ ಮನುವೆಂದು ಮನಸಾರೆ ಕರೆದಿರುವನು. ಅತುಳೈಶ್ವರ್ಯದ ನಡುವೆ ಮುಳುಗಿದ್ದು, ನಲ್ಲೆಯರ ಜೆಂದುಟಿಯನ್ನು ಹೀರುತ್ತಾ ಪರಬೊಮ್ಮನಲ್ಲಿ ತನ್ಮಯನಾಗುವ ಅಪೂರ್ವ ಯೋಗೀಶ್ವರ ರತ್ನಾಕರನ ಚಕ್ರೇಶ್ವರ! ನೆನೆದಾಕ್ಷಣ ಜೀವನ್ಮುಕ್ತನಾಗಿ ನೋಡುತ್ತಿದ್ದಂತೆಯೇ ಭರತೇಶ ನಿರಾಕಾರನಾದ ಶೃಂಗಾರಸಿದ್ಧ!

ಭರತೇಶನ ರಮಣಿಯರೆಲ್ಲ ಪ್ರಾಣೇಶನಿದಿರು ಕಾವ್ಯಕನ್ನೆಯರಾಗಿ ನುಳಿದಾಡಿ, ಮೋಕ್ಷಕನ್ನೆಯ ಬರುವಿಂಗೆ ಮಂಗಳ ಹಾಡಿದ ಮದನಕನ್ನೆಯರು! ಕುಸುಮಾಜಿ ಒಮ್ಮೆ ವೀಣಾಪಾಣಿಯಾಗಿ ನಾದಲೋಲೆಯಾಗಿ ಕಂಡುಬಂದರೆ, ಇನ್ನೊಮ್ಮೆ ಕೈನೀಡಿದ ಕಲ್ಪತರುವಾಗಿ ಅನ್ನಪೂರ್ಣೆಯಾಗಿ ಭೇದವಿಜ್ಞಾನಿಯ ಕಿರುಹೊಟ್ಟೆಯನ್ನು ಹಿಗ್ಗಲಿಸುವಳು. ಮತ್ತೊಮ್ಮೆ ನೈವೆತ್ತಿ ಬಂದ ಕಾಮನಬಿಲ್ಲಿನ ನಲ್ಲೆಯಾಗಿ ಅಂಗಜಾಗಮಸಿದ್ಧನನ್ನು ಮರುಳುಗೊಳಿಸುವಳು. ಕುಸುಮಿ! ಕುಸುಮಿ! ಕುಸುಮಾಜಿ! ಕುಸುಮೆ!

ಕುಸುಮಿನಿ! ಎಂದು ಭೇದವಿಜ್ಞಾನಿ, ಕುಸುಮಿಾ ನಾಮ ಜಪವನ್ನು ಜಪಿಸಿ ಪಾವನನಾಗುವನು.

"ಅಮೃತ ವಾಜಾಂಕನ ಅಮೃತವಾಣಿಗೆ ಶಿಕ್ಷಾಗುರು ಮಕರಂದಾಜಿ .... ಮಾತಿಗೆ ಮಾತನ್ನು ಪೋಣಿಸಿ ತನ್ನ ಭಾವೀಪತಿಯಾದ ಭರತೇಶನೊಡನೆ ಮಾತಿನ ಮಲ್ಲಗಾಳಗವನ್ನು ನಡೆಸಿ ಆತನನ್ನು ಮೆಚ್ಚಿಸುವಳು." [31]

ಹುಬ್ಬುಗಂಟಿಕ್ಕಿದಾಗ ಪದ್ಮಿನಿ ಮಿಂಚಿನ ನಾಲಗೆಯಾಡಿಸುವ ಸಿಡಿಲಕನ್ನೆ; ಪ್ರಣಯ ಉಕ್ಕಿದಾಗ ಕಾತರತೆಯ ಕಾರ್ಮೋಡದ ನಡುವೆ ತಳಮಳಿಸುವ ಮಿಂಚಿನ ಕನ್ನೆ! ಈ ವೇಳೆಯಲ್ಲಿ ಈಕೆಯ ನಾಲಗೆಯೇ ಏಕೆ ಅಂಗಾಂಗವೂ ಮಿಂಚಿನ ಗೊಂಚಲಾಗಿ ತೊನೆದಾಡದಿರದು.

ವನಿತಾರತ್ನವಾದ ಸುಭದ್ರೆ ಚಕ್ರೇಶನ ಚತುರ್ದಶ ರತ್ನಗಳ ಮಾಲೆಯಲ್ಲಿ ನಟ್ಟನಡುವೆ ಕಂಗೊಳಿಸುವ ಕನ್ಯಾಕೌಸ್ತುಭ ರತ್ನ! ಭರತೇಶನ ಚಕ್ರೇಶಪದವಿಯನ್ನು ಪರಿಪೂರ್ಣಗೊಳಿಸಿದ ರಾಜರಾಜೇಶ್ವರಿ ಈ ಸುಭದ್ರಾ ಚಕ್ರೇಶ್ವರಿ! ಇಂಥ ಪ್ರಮುಖಪಾತ್ರಕ್ಕೆ ಪಂಪಮಹಾಕವಿ ತನ್ನ ಮಹಾಕಾವ್ಯದಲ್ಲಿ ಕೇವಲ ಒಂದೇ ಒಂದು ವಾಕ್ಯವನ್ನು ಮಿಾಸಲಾಗಿಟ್ಟಿರುವನಲ್ಲ! "ಅಂತಾ ಸುಭದ್ರೆಯೆಂಬ ಕನ್ಯಾರತ್ನಮುಂ ಅಂಬರ ಚರೋಚಿತ ಕಲ್ಯಾಣಗಳಿಂದಂ ಆ ಪುರುಷರತ್ನಾಕರನೊಳ್ ನೆರಪಿ ತಮ್ಮ ಮನೆಯೊಳುಳ್ಳ ಅನರ್ಘ್ಯರತ್ನಂಗಳೆಲ್ಲಮುಂ ಬಳುವಳಿಗೊಟ್ಟು ಬೀಳ್ಕೊಂಡು ಪೋದರ್". [32] ಇತ್ತ ರತ್ನಾಕರನಾದರೋ ಆರು ಸಂಧಿಗಳನ್ನು ಸುಭದ್ರಾಪರಿಣಯಕ್ಕಾಗಿ ತೆರವುಮಾಡಿ ೮೭೨ ಸಾಂಗತ್ಯರತ್ನ

---

[31] ಶ್ರೀ. ತ. ಸು. ಶಾಮರಾಯರು, ಭ. ವೈ. ಸಂ. ಪೀ. 51.

[32] ಪಂಪ, ಆ. ಪು. XIII—೮೦ ವಚನ.

ಮಾಲಿಕೆಯನ್ನು ಚಕ್ರೇಶ್ವರಿಗೆ ಕಿರುಗಾಣಿಕೆಯಾಗಿ ತೊಡಿಸಿ ಕನ್ನಡಿಗರು ಕೃಪಣರಲ್ಲವೆಂಬುದನ್ನು ಸಾರಿಬಿಟ್ಟಿರುವನು!

ಯಶೋಭದ್ರೆ, ಸುನಂದೆ, ಪಂಡಿತೆ, ಕಾಳಂದಿ, ಮಧುವಾಣಿ— ಈ ಪಾತ್ರಗಳು ಭರತೇಶ ವೈಭವದಲ್ಲಿ ಕಿಕ್ಕಿರಿದಿರುವ ನೂರಾರು ಚಿತ್ರಗಳ ನಡುವಿದ್ದೂ ವ್ಯಕ್ತಿತ್ವ ಹೀನವಾಗದೆ ಎದ್ದು ಕಾಣುವಂತೆ ವೈಶಿಷ್ಟ್ಯಪೂರ್ಣವಾಗಿ ರೂಪಗೊಂಡಿವೆ. ಇವುಗಳಲ್ಲಿ ಯಾವು ದೊಂದನ್ನು ಕಳಚಿದರೂ ವೈಭವದ ಒಂದಂಶವನ್ನು ಕಳಚಿಹಾಕಿ ದಂತಾಗದಿರದು.

ತ್ರಿಷಷ್ಠಿ ಶಲಾಕಾಪುರುಷರಲ್ಲಿ ಮೊಟ್ಟಮೊದಲನೆಯ ಸಿದ್ಧ ನಾಗುವ ಭಾಗ್ಯ ಯಾರೊಬ್ಬರಿಗೂ ಲಭಿಸಲಿಲ್ಲ. ಆದರೆ ಶಲಾಕಾ ಪುರುಷನಲ್ಲದ ಬಾಹುಬಲಿ, ಪ್ರಥಮ ತೀರ್ಥೇಶನಿಗಿಂತ ಮುಂ ದಾಗಿ ಅಷ್ಟಕರ್ಮಗಳನ್ನೂ ಧ್ವಂಸಮಾಡಿ ಮುಕುತಿ ಮಹಾಸಾ ಮ್ರಾಜ್ಯದ ಪ್ರಪ್ರಥಮ ಸಿದ್ಧನಾಗಿ ಜೈನದಿಗಂಬರ ಸಂಪ್ರದಾಯ ದಲ್ಲಿ ಯಾರಿಗೂ ಇಲ್ಲದ ಪ್ರಾಮುಖ್ಯತೆಯನ್ನು ಪಡೆದನು.

ತೃಣಮಿವ ವಿಗಣಯ್ಯ ಪ್ರಾಜ್ಯ ಸಾಮ್ರಾಜ್ಯ ಭಾರಂ
ಚರಮತನು ಧರಾಣಾಮಗ್ರಣೀಃ ಸೋವತಾದ್ವಃ ‖ [33]

[ಸಾಮ್ರಾಜ್ಯವನ್ನೆಲ್ಲ ತೃಣವಾಗಿ ಭಾವಿಸಿ ಎಲ್ಲವನ್ನೂ ತೊರೆದು ದಿಗಂಬರ ಯತಿಯಾಗಿ ಕೃತಯುಗದಲ್ಲಿ ತದ್ಭವ ಮೋಕ್ಷ ಗಾಮಿಗಳಲ್ಲಿ ಮೊದಲನೆಯವನೆನಿಸಿದ ಬಾಹುಬಲಿಸ್ವಾಮಿ ನಿಮ್ಮನ್ನು ರಕ್ಷಿಸಲಿ.]

ಅನುಪಮರೂಪನೇ ಸ್ಮರನುದಗ್ರನೆ ನಿರ್ಜಿತ ಚಕ್ರಿ ಮತ್ತುದಾ।
ರನೆ ನೆರೆಗೆಲ್ದು ಮಿತ್ತ ನಖಿಳೋರ್ವಿಯು ನತ್ಯಭಿಮಾನಿಯೇ ತಪಃ ‖

---

33 ಜಿನಸೇನರು, ಪೂ. ಪು. ಪ. ೩೬–೨೦೪.

ಸ್ಥನುಮೆರಡಂಘ್ರಿಯಿತ್ತಿಳಿಯೊಳಿರ್ದಪುದೆಂಬ ನನೂನ ಬೋಧನೇ ।
ವಿನಿಹಿತ ಕರ್ಮಬಂಧನೆನೆ ಬಾಹುಬಲೀಶನಿದೇನುದಾತ್ತನೋ ॥
ಅನುಪಮರೂಪನೇ ಸ್ಮರನುದಗ್ರನೆ ನಿರ್ಜಿತ ಚಕ್ರಿ ಮತ್ತುದಾ ।
ರನೆ ನೆರೆಗೆಲ್ದು ಮಿತ್ತನಖಿಳೋರ್ವಿಯ ನತ್ಯಭಿಮಾನಿಯೇ ತಪಃ ॥
ಸ್ಥನು ಮೆರಡಂಘ್ರಿಯಿತ್ತಿಳಿಯೊಳರ್ದಪುದೆಂಬ ನನೂನಬೋಧನೇ ।
ವಿನಿಹಿತಕರ್ಮಬಂಧನೆನೆ ಬಾಹುಬಲೀಶನಿದೇನುದಾತ್ತನೋ ॥

ಬೊಪ್ಪಣ್ಣಕವಿ* ಶ್ರವಣಬೆಳುಗುಳದ ಗೊಮ್ಮಟ ಮಹಾದ್ವಾರದ ವಾಮಭಾಗದಲ್ಲಿ ಮೇಲ್ಕಂಡ ಮಾತನ್ನು ಶಿಲಾಶಾಸನದಲ್ಲಿ ಕೊರೆದ ನೆಲಸಿಲ್ಪನೆಗಂ ನಿಲಿಸಿ ಹೋಗಿರುವನಲ್ಲ! ಪಂಪನಿಂದ ಕುವೆಂಪುತನಕ ಕಾವ್ಯಕಲೆಯಲ್ಲೂ, ಚಾಮುಂಡರಾಯನಿಂದ ಶಾಂತಿಸಾಗರರತನಕ ಶಿಲ್ಪಕಲೆಯಲ್ಲೂ[34] ಈ ಬಾಹುಬಲಿಯ ವ್ಯಕ್ತಿತ್ವ ಕೊನರುತ್ತಿದೆಯೇ ಹೊರತು ಎಂದೂ ಕೊಂಕಿಲ್ಲವಲ್ಲ!

ಹಿಂದುಮುಂದನ್ನು ಮರೆತು ನಾವು ಕೇವಲ ಕಾವ್ಯದೃಷ್ಟಿಯಿಂದ ಅವಲೋಕಿಸುವುದಾದರೆ; ಕಲೆಗಾಗಿ ಕಲೆ ಎಂಬುದನ್ನು

---

* ಕ್ರಿ.ಶ. ೧೧೮೦.

[34] ಕುಂಥಲಗಿರಿಯಲ್ಲಿ 'ಶ್ರೀ ಆಚಾರ್ಯ ಚಕ್ರವರ್ತಿ ಶಾಂತಿಸಾಗರ ದಿಗಂಬರ ಮುನಿಗಳು' ಯಮಸಲ್ಲೇಖನ ತೆಗೆದುಕೊಂಡು ೧೭-೯-೧೯೫೫ ರಂದು ಸಮಾಧಿಮರಣವನ್ನಪ್ಪಿದರು. ಇವರ ಅನುಜ್ಞೆಯ ಮೇರೆಗೆ ೨೮ ಅಡಿ ಎತ್ತರವಾಗಿರುವ ಹಾಲ್‌ಗಲ್ಲಿನ ಬಾಹುಬಲಿ ಮೂರ್ತಿಯನ್ನು ರಾಜಾಸ್ಥಾನದಲ್ಲಿ ಮಾಡಿಸಿ 'ಶ್ರೀ. ಸಮಂತಭದ್ರಾಚಾರ್ಯ ದಿಗಂಬರ ಮುನಿಗಳು' ಇದನ್ನು ಕೊಲ್ಲಾಪುರ ಜಿಲ್ಲೆಯಲ್ಲಿನ ಬಾಹುಬಲಿ ಆಶ್ರಮಕ್ಕೆ ೬-೩ ೧೯೫೮ ರಂದು ತಂದರು. ಈ ಬೃಹನ್ಮೂರ್ತಿ ೩೨ ಟನ್ ತೂಕವಿದೆ ಇದರ ಪ್ರತಿಷ್ಠಾಮಹೋತ್ಸವ ೧೯೬೩ ಫೆಬ್ರವರಿ ಮೊದಲನೆಯ ವಾರದಲ್ಲಿ ವಿಜೃಂಭಣೆಯಾಗಿ ನೆರವೇರಿತು.

ಒಪ್ಪುವುದಾದರೆ ರತ್ನಾಕರನ ಗೋಮಟ ಸಾಹಿತ್ಯ ಗಗನಚುಂಬಿಯಾಗಿ ಕರುಣಾರಸದ ಕಾರ್ಗಾಲದ ಹೊಳೆಯಾಗಿ ಕೊನೆಗೆ ವಾತ್ಸಲ್ಯದ ವಾರಾಶಿಯಾಗಿ ಮೊರೆಯುತ್ತಿದೆ ಎಂದು ಧಾರಾಳವಾಗಿ ಹೇಳಬಹುದು. ತಮ್ಮ, ತಿಳಿಗೇಡಿಯಾಗಿ ವಿಶ್ವಕುಟುಂಬಿಯಾದ ಅಣ್ಣನನ್ನು ಎದುರಿಸುವುದು, ಕರುಣಾಮಯಿಯಾದ, ವಾತ್ಸಲ್ಯಮೂರ್ತಿಯಾದ ಹಿರಿಯಣ್ಣ ಅನುಜನನ್ನು ಕುರಿತು "ಮನಸಿಜ, ಕೇಳಣ್ಣ ಚಕ್ರವ ಬಯಸಿತಿಲ್ಲಾನು, ಶಸ್ತ್ರಾಲಯದೊಳು ತಾನೆ ಹುಟ್ಟಿ ಏಳಿಸಿ ನಾಡ ಸುತ್ತಿಸಿತು ನಿಮ್ಮೆಲ್ಲರ ಆಲಿಗೆ ನೋವಾಗುವಂತೆ!" * ಎಂದು ಮರುಗುತ್ತ ತನ್ನ ಸಕಲೈಶ್ವರ್ಯವನ್ನೂ ತಮ್ಮನಿಗೆ ಅರ್ಪಿಸಿಬಿಡಲು ಸಿದ್ಧನಾದಾಗ ಕಲ್ಲೆದೆಯೂ ಕರಗದಿರದು. ಸ್ನೇಹ ಸೌಹಾರ್ದತೆಯಿಂದ ದ್ವೇಷಾಸೂಯೆಯನ್ನು ನಂದಿಸುವ ಶಾಂತಿಮಂತ್ರವನ್ನು ಘೋಷಿಸಿ ರತ್ನಾಕರ ಮಹಾಕವಿ ಅನುಪಮ ಸಮಾಜಸುಧಾರಕನಾಗಿರುವನು!

ಪಾತ್ರದೃಷ್ಟಿಯಿಂದ ನೋಡಿದಾಗ ರತ್ನಾಕರನ ಬಾಹುಬಲಿ ಶೀರ ಕೆಳಮಟ್ಟಕ್ಕಿಳಿದಿದ್ದಾನೆಂದು ಹೇಳದೆ ವಿಧಿಯಿಲ್ಲ. ಈತ ಕೇವಲ ವಿಲಾಸಪ್ರಿಯ, ಲಘುಮನೋವೃತ್ತಿಯ ಸಾಧಾರಣ ವ್ಯಕ್ತಿ; ಸೌಜನ್ಯಮೂರ್ತಿಯೂ ಸ್ನೇಹಪರನೂ, ದಯಾದಾಕ್ಷಿಣ್ಯ ಸಾಗರನೂ ಆದ ಹಿರಿಯಣ್ಣನಿದಿರು ಬಾಹುಬಲಿ ಖಡ್ಗವೆತ್ತಿ ತಿಳಿಗೇಡಿಯಾಗಿರುವನು; ಮನೋದೌರ್ಬಲ್ಯದಿಂದ ದೀಕ್ಷೆಯಾಂತ ಅಳ್ಳೆದೆಯ ಸನ್ಯಾಸಿ. ಈತನಿಗೆ ಸ್ವಬುದ್ಧಿಯಿಲ್ಲ ಜೊತೆಗೆ ಹೇಳಿದ ಮಾತನ್ನು ಕೇಳುವಂತಿಲ್ಲ. ಸಾಮಾನ್ಯ ಸೈನಿಕನೂ ಅಪಹಾಸ್ಯ ಮಾಡುವಷ್ಟು ಬಾಹುಬಲಿಯ ಪಾತ್ರ ರತ್ನಾಕರನ ಕೈಲಿ ಲಘುವಾಗಿ ಹೋಗಿದೆ. ಈ ಸಂದರ್ಭದಲ್ಲಿ ರತ್ನಾಕರ

---

* ಭ. ವೈ. ಸಂ. ೫೧. ಪ. ೧೦೪.

ಸಾಕ್ಷೀಭೂತನಾಗಿ ಸಂದರ್ಭವನ್ನು ಪರಿಭಾವಿಸದೆ ಪಕ್ಷಪಾತ ಮಾಡಿದನೋ ಏನೊ. ತನಗಾಗದ ದಿಗಂಬರಯತಿಗಳನ್ನು ಟೀಕಿಸುವಾಗ ಈ ಕವಿ ಯಾವ ಮಾತುಗಳನ್ನು ಬಳಸಿರುವನೋ ಅದೇ ಮಾತನ್ನು ಬಾಹುಬಲಿಮುನಿಯ ವಿಚಾರದಲ್ಲೂ ಬಳಸಿರುವುದರಿಂದ ಮೊದಲೇ ಲಘುವಾಗಿದ್ದ (ರತ್ನಾಕರನ ಕೈಲಿ) ಪಾತ್ರ ಇನ್ನೂ ಹಸಗೆಟ್ಟದೆ. ಅಣ್ಣನನ್ನು ಕಂಡು ಗೌರವಿಸಬೇಕೆಂದು ಹಿತಚಿಂತಕರೆಲ್ಲ ಬಾಹುಬಲಿಗೆ ಬುದ್ಧಿ ಹೇಳಿದರೂ ಇವನು ಕೇಳಲೊಲ್ಲದೆ ಅವರನ್ನೆಲ್ಲ ಹೊಡಿಸಿದನಂತೆ.

**ಸುತ್ತ ಸುಮ್ಮನೆ ನೋಡುತಿರಪೆ ಬುದ್ಧಿಯ ಹೇಳ | ಲಿತ್ತಲಾರ್**
**ಕರೆತಂದರಿವರಾ ||**

**ತೊತ್ತಿರ ಬಡಿಬಡಿಯೆಂದು ಮನ್ಮಥ ನೇಮು | ವಿತ್ತನು**
**ಕಳಕಂಠನೊಡನೆ ||೩೩|| ***

**ಬಾಳೆಯ ಸುಳಿಯ ಕಟ್ಟಿಗೆ ಕೋಲೊಳವ ಹೊಯ್ದು |**
**ನೇಳೇಳು ಮೂಲೆ ಗೋಡಾಡಿ ||**

**ಆ ಲೇಸುವೆಂಗಳ ವ್ಯೆಗೆ ಬಾಸುಳ ಪುಷ್ಪ |**
**ಮಾಲೆಯಂತೆದ್ದುವಾಕ್ಷಣವೆ ||೭೪|| ***

ಸುನಂದಾದೇವಿ ಬಾಹುಬಲಿಗೆ ಹಿತೋಕ್ತಿಗಳನ್ನಾಡುವಳು. "ಅಣ್ಣನ ಕೂಡೆ ಕಾಳಗವ ಮಾಡೆಂದಾನು ಬೆಣ್ಣೆವಾಲೂಡಿಸಾಕಿದೆನೆ?" * "ಎಲ್ಲರು ತಪಸಿಗೆಯ್ದಿರು ನೀನೊಬ್ಬ ನಮ್ಮೆಲ್ಲರರ್ತಿಯ ಸಲಿಸಣ್ಣ" * "ಕದನವೆಂದರೆ ನೋವಳು, ಮಾತಿನೊಳು ಸಂತಸಪೋರಿ ಪ್ರೋಪ ಗದಕನೆನೆದು ಯುದ್ಧವಿಲ್ಲೆಂದು ನುಡಿಪನು. ಮದನಗೆ ವಂಚನೆ ಸಹಜಾ" * "ನಿನ್ನ ಬಿಲ್ಲು ಡೊಂಕಾದರೆ ನಿನ್ನ ನಡೆಯೂ ಡೊಂಕಾಗಬೇಕೆ?" * ಎಂದು

---

* ಭ. ವೈ. ಸಂ. ೪೮. * ಭ. ವೈ. ಸಂ. ೫೦ ;

ಒಬ್ಬ ಮಡದಿ ಬಾಹುಬಲಿಯನ್ನು ಕೇಳೇಬಿಡುವಳು! "ಅಣ್ಣಗೊಡ್ಡಿದೊಂದು ಕೊರತೆಯಲ್ಲದೆ ಮಿಕ್ಕ ಬಣ್ಣದೊಳವಗುಂಟೆ ಕೊರತೆ?" * ಅನುವುದನ್ನೆಲ್ಲ ಅಂದು ಕೊನೆಯಲ್ಲಿ ರತ್ನಾಕರ ಈ ಒಗ್ಗರಣೆ ಹಾಕಿ ಬಾಹುಬಲಿಗೆ ಸಹಾನುಭೂತಿ ತೋರಲು ಪ್ರಯತ್ನಿಸಿರುವನು. ಭರತೇಶ ವೈಭವದ ನೂರಾರು ಚಿತ್ರಗಳನ್ನು ಸರ್ವಾಂಗಸುಂದರವಾಗಿ ಚಿತ್ರಿಸಿ ಕೃತಕೃತ್ಯನಾದ ರತ್ನಾಕರ, ಬಾಹುಬಲಿಯನ್ನು ಕೈಗೆತ್ತಿಕೊಂಡಾಗ ಮುಗ್ಗರಿಸಿದನಲ್ಲ ಎಂದು ಸಹೃದಯರು ಸಹಾನುಭೂತಿ ತೋರಬೇಕು.

ಇನ್ನುಳಿದ ಪುರುಷ ಪಾತ್ರಗಳಲ್ಲಿ ದಕ್ಷಿಣನಾಯಕ ಮೇಘೇಶ ನಮಿರಾಜ, ಅರ್ಕಕೀರ್ತಿ, ಆದಿರಾಜ—ಇವರನ್ನು ರತ್ನಾಕರ ಓದುಗರ ಮನದಲ್ಲಿ ನೆಲೆಯೂರುವಂತೆ ರೂಪಿಸಿರುವನು.

## ಶತಕತ್ರಯ

'ರತ್ನಾಕರ ಶತಕ' ದಲ್ಲಿ ಬರುವ "ಶೃಂಗಾರ ಶ್ರೀಕವಿ ಹಂಸ ರಾಜನೊಡೆಯ ರತ್ನಾಕರಾಧೀಶ್ವರಾ!"[1] ಎಂಬ ವಾಕ್ಯದಲ್ಲಿರುವ 'ಹಂಸರಾಜ' ಎಂಬುದು ಅಂಕಿತನಾಮವೆಂದು ಪಟ್ಟುಹಿಡಿದು 'ರತ್ನಾಕರಾ' ಎಂಬ ಮಾತನ್ನು ಕೈಬಿಟ್ಟು ಕವಿಚರಿತೆಕಾರರು[2] 'ರತ್ನಾಕರ ಶತಕ' ಭರತೇಶ ವೈಭವದ ರಚನಾಕಾರನಾದ ರತ್ನಾಕರನದಲ್ಲವೆಂದು ವಾದಿಸಿ ಉಳಿದೆರಡು ಶತಕಗಳು ಮಾತ್ರ ಆತನವೇ ಎಂದು ಒಪ್ಪಿಕೊಂಡಿರುವರು. ರತ್ನಾಕರ ಶತಕದಲ್ಲಿ ಚಿದಂಬರ

---

* ಭ ವೈ. ಸಂ ೫೧.

1 ರ. ಶ. ಪ. ೧;

2 ಶ್ರೀ. ಆರ್. ನರಸಿಂಹಾಚಾರ್ಯ, ಕ. ಕ. ಚ. II ೨೭೪.

ಪುರುಷ ಹಾಗು ನಿರಂಜನಸಿದ್ಧ ಎಂಬ ಮಾತುಗಳು ಬಂದಿಲ್ಲ ವೆಂದು ಅವರು ತಮ್ಮ ವಾದವನ್ನು ಪುಷ್ಟೀಕರಿಸಲು ಪ್ರಯತ್ನಿಸಿ ರುವರು. ಆದರೆ ರತ್ನಾಕರನ ಉಸಿರಾದ ಭೇದವಿಜ್ಞಾನ, ಭರ ತೇಶ ವೈಭವದಲ್ಲಿ ರತ್ನಾಕರ ಒತ್ತಿ ನುಡಿದಿರುವ ಸತ್ಕಾವ್ಯದ ಗುರಿ ಹಾಗು ಭರತೇಶನ ಆದರ್ಶಮಯವಾದ ವ್ಯಕ್ತಿತ್ವ ಇವೆಲ್ಲವನ್ನೂ ರತ್ನಾಕರ ಶತಕದಲ್ಲೂ ಮಹಾಕವಿ ಪುನರುಚ್ಚರಿಸಿ ಈ ಕೃತಿಯೂ ತನ್ನದೇ ಎಂಬುದಕ್ಕೆ ಆಂತರಿಕ ಪ್ರಮಾಣಗಳನ್ನು ಒದಗಿಸಿರುವ ನಲ್ಲ.[3] ಭರತೇಶ ವೈಭವದ ರಚನೆ ಪೂರೈಸಿದ ಮೇಲೆಯೇ ರತ್ನಾಕರನಿಂದ 'ರತ್ನಾಕರ ಶತಕ' ರಚನೆಯಾಗಿದೆಯೆಂದು ಊಹಿಸಲು ಅವಕಾಶವಿಲ್ಲದೇ ಇಲ್ಲ.

**ಪೆರರಂ ಪೇಳ್ದೊಡೆ ನೋವರಾನೆನಗೆ ಪೇಳ್ವೆಂ ಕಾಮಿನೀ ಮೂತ್ರದೊ |**
**ಜ್ಜರಮೆಯ್ಯಂ ಲತೆಯೆಂದು ಮಾಂಸಕುಚಮಂ ಹೇಮಾಬ್ಜ**
**ಮೆಂದೆಂದು ನೆ ||**
**ತ್ತರನುಂಡಾ ತುಟಿಯಂ ಸುಧಾರುಚಿಯೆನುತ್ತಾಂ ಬಿಳ್ದುದುಂ ಸಾಲದ |**
**ನ್ಯರನೊಯ್ದಿಂ ಕವಿಯೋ ವಲಂ ಕಪಿಯೊ ನಾಂ ರತ್ನಾಕರಾಧೀಶ್ವರಾ ||***

ರತ್ನಾಕರ, ಯೋಗ ಭೂಮಿಕೆಗೆ ಏರಿಹೋಗಿ ಅಲ್ಲಿಂದ, ಹಿಂದೆ ತಾನಿದ್ದ ರಸಭೂಮಿಕೆಯ ಕುಂದುಕೊರತೆಗಳನ್ನು ಈಕ್ಷಿಸಿ ಈ ಮಾತನ್ನು ನುಡಿದಿರುವನು. ಅದರಿಂದ 'ರತ್ನಾಕರ ಶತಕ,' 'ಅಪರಾಜಿತೇಶ್ವರ ಶತಕ' ಹಾಗು 'ತ್ರಿಲೋಕ ಶತಕ' ಈ

---

[3] ಈ ಬಗ್ಗೆ ತರ್ಕಬದ್ಧವಾದ ವಿವರಣೆ ಬೇಕಾದರೆ ಜಿ. ಬ್ರಹ್ಮಪ್ಪ, 'ರತ್ನಾಕರ ಶತಕವನ್ನು ಬರೆದವರಾರು' ರ. ಶ. ಸಾ. ಪು. ೧೦೩ ನೋಡುವುದು.

* ರ. ಶ. ಪ. ೬೭.

ಮೂರೂ ರತ್ನಾಕರನವೆ. ರಾಜಾವಳೀ ಕಥೆಯ ದೇವಚಂದ್ರ,† ಭರತೇಶವೈಭವದ ಸಂಪಾದಕರು,‡ ಭರತೇಶವೈಭವದ ಸಂಗ್ರಹ ಕಾರರು,§ ಶತಕತ್ರಯದ ಸಂಪಾದಕರು,* ರಾಷ್ಟ್ರಕವಿ ಗೋವಿಂದಪೈಗಳು—ಇವರೆಲ್ಲ ಶತಕತ್ರಯ ಪೂರ್ತಿ ರತ್ನಾಕರನ ವೆಂದು ಮನಸಾರೆ ಒಪ್ಪಿಕೊಂಡಿರುವರು.[4] ರತ್ನಾಕರನ ಶತಕ ಗಳಲ್ಲಿ ಶೃಂಗಾರ ಸನ್ನಿವೇಶಗಳಿಲ್ಲ; ಸರಸಸಲ್ಲಾಪಗಳಿಲ್ಲ; ಇಲ್ಲಿಯ ವಾತಾವರಣ ಬಿಗಡಾಯಿಸಿದ ವಾತಾವರಣ; ಎಲ್ಲರ ಬೆನ್ನಹಿಂದೆಯೂ ಜವರಾಯ ಹೊಂಚುಹಾಕಿರುವ ರಹಸ್ಯವನ್ನು ರತ್ನಾಕರ ಭೇದಿಸಿರುವನು. ವೈಮರೆತ ಜೀವಕೋಟಿಯನ್ನು ವಿಶ್ವಾನುಕಂಪದಿಂದ ಈ ಕವಿ ಎಚ್ಚರಿಸುತ್ತಿರುವನು. ಆತ್ಮಸಿರಿಯ ಅನಂತತೆಯನ್ನು ನೆನಪಿಗೆ ತಂದು ಅದನ್ನು ಗಳಿಸಬೇಕೆಂದು ಎಲ್ಲ ರನ್ನೂ ಒತ್ತಾಯಮಾಡುತ್ತಿರುವನು. ಪ್ರಗತಿ ಸಾಲದೆಂದು ಆಗಾಗ ತನ್ನನ್ನೇ ನಿಟ್ಟಿಸಿಕೊಂಡು ನಿಟ್ಟುಸಿರು ಬಿಡುವನು; ತನ್ನನ್ನು ತಾನೇ ಸಮಾಧಾನಮಾಡಿಕೊಳ್ಳುವನು. ಎಲ್ಲರ ಪಾಡೂ ಇಷ್ಟೆ! ಯಾರಿಗೆ ಯಾರುಂಟು? ನಮ್ಮ ದಾರಿಯನ್ನು ನಾವೇ ಸವೆಸಬೇಕು ಎಂದು ಧರ್ಮರಹಸ್ಯವನ್ನು ಬಿತ್ತರಿ ಸಿರುವನು.

---

† ಶ. ತ್ರ. ಮು. ಪು. II, ಸಂ. ಶ್ರೀ. ಎ. ಶಾಂತಿರಾಜಶಾಸ್ತ್ರಿಗಳು.

‡ ಶ್ರೀ. ಉಗ್ರಾಣದ ಮಂಗೇಶರಾಯರು, ಭ. ವೈ. ಪೀ. ಪು. VI

§ ಶ್ರೀ. ತ. ಸು. ಶಾಮರಾಯರು, ಭ. ವೈ. ಸಂ. ಪೀ. ಪು. XVII.

* ಶ್ರೀ. ಎ. ಶಾಂತಿರಾಜಶಾಸ್ತ್ರಿಗಳು, ಶ. ತ್ರ. ಮು. VI–VII.

4 ಶ್ರೀ. ರಾಷ್ಟ್ರಕವಿ ಗೋವಿಂದ ಪೈಗಳು, ರತ್ನಾಕರಸಿದ್ಧನ ಕಾಲ ನಿರ್ಣಯ, ವಿ. ಅ. ೧೯೫೨ ಜೂನ್ ಸಂಚಿಕೆ

ರತ್ನಾಕರನ ಮೇಲೆ ಭಕ್ತಿಯುಗದ ಪ್ರಭಾವ ಚೆನ್ನಾಗೇ ಬಿದ್ದಿದೆ. ಜೈನಧರ್ಮದ ಜ್ಞಾನಮಾರ್ಗಕ್ಕೆ ರತ್ನಾಕರ ಭಕ್ತಿಯ ರಸಲೇಪನವೆಸಗಿರುವನು.

**ಯೋಗವಾಗಲಿ ಭೋಗವಾಗಲಿ ನಿನ್ನ ಸಂ । ಯೋಗವಾದರೆ ತಾನೆ**
**ಮುಕ್ತಿ ॥**
**ಶ್ರೀ ಗುರುನಾಥ ನನ್ನೆದೆಯೊಳಿರಲೆ ಮಹಾ । ಭೋಗಿ**
**ಚಿದಂಬರಪುರುಷಾ ॥೯೭॥ ***

ಮಹಾವೀರನ ಔದಾರ್ಯ ಕಾಲ ಕಳೆದಂತೆ ಜೈನ ಧರ್ಮದಲ್ಲಿ ಲುಪ್ತವಾಗುತ್ತ ಬಂದಿತು. ಜಾತಿ ಕಟ್ಟಳೆಯನ್ನು ಉಚ್ಚನೀಚ ಭಾವವನ್ನು ಮಹಾವೀರ ತೊತ್ತಳದುಳಿದನಾದರು ಮುಂದೆ ಬಂದವರು ಅದನ್ನು ಮರೆತು ಸಂಕುಚಿತ ದೃಷ್ಟಿಯನ್ನು ಬೆಳೆಸಿಕೊಂಡರು. ಮಹಾವೀರನ ಔದಾರ್ಯವನ್ನು ರತ್ನಾಕರ ಮತ್ತೊಮ್ಮೆ ಎತ್ತಿಹಿಡಿದನು. ಈ ಸಂದರ್ಭದಲ್ಲಿ ವೀರಶೈವ ಮತ ಈತನಿಗೆ ಸ್ಫೂರ್ತಿಯಿತ್ತಿದೆ. "ಆವನುಮಕ್ಕೆ ನಿಮ್ಮಡಿಗಳಂ ನೆನೆವಾತನೆ ನನ್ನ ಬಂಧು .... ನನ್ನ ಮೆಚ್ಚಿನದೇವನಂ ನಚ್ಚಿದಾತನೆನಗನ್ಯನೇ ಪೇಳಪರಾಜಿತೇಶ್ವರಾ ? "[5] ಮಹಾವೀರನ ಸಮತಾಭಾವ ಹಾಗು ವಿಶ್ವಾನುಕಂಪ ಅನುಭವಮಂಟಪವನ್ನು ಹೊಕ್ಕು ಪ್ರತಿಧ್ವನಿತವಾಗಬೇಕಾಯಿತು. ಇದಕ್ಕಾಗಿ ರತ್ನಾಕರನೂ ಕಲಿಕಾಲಗಣಧರನಾಗಿ ಬರಬೇಕಾಯಿತೇನೋ !

ಅಂದಿಗೆ ಸಮಾಜದಲ್ಲಿದ್ದಿರಬಹುದಾದ ಕೊಳಚನ್ನು ಮೂಲೋತ್ಪಾಟನವೆಸಗಲು ರತ್ನಾಕರ ಪಣತೊಟ್ಟನು. ಆಗ ಸೋಮಾರಿಗಳೂ, ಆಷಾಢಭೂತಿಗಳೂ, ಸ್ವಾರ್ಥಪರರೂ, ವಿದ್ಯಾವಂತ

---

* ಭ. ವೈ ಸಂ. ೬೨, ಪ. ೯೬ ;

5 ಅ. ಶ. ಪ. ೫೪.

ವೇಷಧಾರಿಗಳೂ ರತ್ನಾಕರನ ಮೇಲೆ ತಿರುಗಿಬಿದ್ದರು. ಈ ವೇಳೆಯಲ್ಲಿ ರತ್ನಾಕರ ನಿಷ್ಠುರನಾಗಬೇಕಾಯಿತು, ನಿರ್ದಾಕ್ಷಿಣ್ಯ ಮನೋಪ್ರವೃತ್ತಿಯನ್ನು ತೋರಬೇಕಾಯಿತು. ಭರತೇಶ ವೈಭವದ ಸುಕೋಮಲಭಾವದ ವೇಣುಗಾನವಿಶಾರದನಾದ ರತ್ನಾಕರ ಈಗ ಕಂಡುದನ್ನು ಕಂಡಂತೆ ಬಿಚ್ಚುಮಾತಾಡುವ ಬೈರಾಗಿಯಾಗಿ ಪಾಂಚಜನ್ಯವನ್ನು ಮೊಳಗಿರುವನು. ಈತನ ಮನೋಧರ್ಮ ಶತಕದ್ವಯದಲ್ಲಿ (ರ. ಶ. ಮತ್ತು ಅ. ಶ.) ವೀರರೌದ್ರರಸಗಳಿಗೆ ಹದಗೊಂಡಿದೆ. ಇಲ್ಲಿಯ ಶೈಲಿ ಮೋಹಕವಲ್ಲದಿದ್ದರೂ ಮೊನಚಾಗಿದೆ, ಒನಪು ಒಯ್ಯಾರ ಇಲ್ಲಿಲ್ಲದಿದ್ದರೂ ಕತ್ತಿಯ ಅಲುಗಿನಂತೆ ಹರಿತವಾಗಿದೆ! ಬಿಗಿಯಾದ ಬಂಧದಲ್ಲಿ, ಮೊನಚಾದ ಭಾಷೆಯಲ್ಲಿ, ನಿರ್ದಾಕ್ಷಿಣ್ಯವಾದ ಹಳಗನ್ನಡದಲ್ಲಿ ಈ ಎರಡು ಶತಕಗಳೂ ಅಭಿವ್ಯಕ್ತಿಗೊಂಡು ರತ್ನಾಕರನ ಮನೋಧರ್ಮದ ಮರ್ಮವನ್ನೂ, ಭಾವದ ಆವೇಶವನ್ನೂ ಸಾರಿವೆ.

ಪಡೆಯೊಳ್ ಬಲ್ಲಿದನಾದೊಡಾ ಪಡೆಯಿನೇಂ ಪಾಪಾರಿಯುಂ ಗೆಲ್ವನೇ ? |
ಕಡುಪಿಂದಂ ಜವನಂ ತೆರಳ್ಚುವನೆ ? ಬಲ್ಪಿಂ ಮೋಕ್ಷಮುಂ ಕೊಂಬನೇ ? ||
ಕಡೆಗಾ ಭೂಪನ ಶಕ್ತಿ ನಾಲ್ಗಳಿಗೆ ಸಲ್ಗುಂ ಮರ್ತ್ಯಕೀಟಂಗಳೊಳ್ |
ಬಿಡು ಯೋಗೀಂದ್ರನ ಶಕ್ತಿಗಾವುದು ಸಮಂ ರತ್ನಾಕರಾಧೀಶ್ವರಾ || *

“ ............ ನಿಮ್ಮೊಳೇಂ ಹಮ್ಮಂ ತೋರ್ಪರೋ
ಕಾವಪೊಳ್ ಕಲಹವೆ ರತ್ನಾಕರಾಧೀಶ್ವರಾ ! *

“ ಆರಿಂದಾದುದೋ ರಾಜ್ಯಲಕ್ಷ್ಮಿ ? ” *

“ ಸುರಪಂ ತನ್ನಿಭವನಿತ್ತು ಮಾವಟಿಗನಪ್ಪಂ ! ............ ನರಕೀಟಾದಿಗಳೇಕೆ ಗರ್ವಿಸುವರೋ ! ” *

ಮದಾಂಧರಾದ ರಾಜಮಹಾರಾಜರಿಗೆ ರತ್ನಾಕರ ತಿರುಗಿಬಿದ್ದು ಕೋಲಾಹಲವೆಸಗಿರುವನು !

---

* ರ. ಶ. ಪದ್ಯ ಕ್ರಮವಾಗಿ ೭೬, ೭೭, ೭೮, ೮೧.

ಎತ್ತೆತ್ತಂ ಲತಾಂಗಿಯರ್ ಸುಳಿವೆರತ್ತತ್ತಾಡುಗುಂ ಕಣ್ಗಳೆ ।
ತ್ತೆತ್ತಂ ಕಾಮಿನಿಯರ್ ಮೊಗಂಪೆಗೆದರತ್ತತ್ತೊಂದುಗುಂ ಜಿಹ್ವೆಮ ॥
ತ್ತೆತ್ತೆತ್ತಂ ಸರಿಮಿಂಡಿಯರ್ ಕೆಗೆದರತ್ತತ್ತೆಯ್ದುಗುಂ ಬುದ್ಧಿ ನಿ ।
ಮ್ಮತ್ತ ಬಾರದು ಕೆಟ್ಟೆನೇವೆನಕಟಾ ರತ್ನಾಕರಾಧೀಶ್ವರಾ ॥೫೫॥

ತನ್ನ ಮನಸ್ಸಿನ ಕಾಮವಿಕಾರಕ್ಕೆ ಕಲೆಯ ಪ್ರಾಕಾರವನ್ನು ರತ್ನಾಕರ ನಿರ್ಮಿಸಿರುವನು.

ಶಾಸ್ತ್ರಂ ಬಂದೊಡೆ ಶಾಂತಿ, ಸೈರಣೆ, ನಿಗರ್ವಂ, ನೀತಿ, ಮೆಲ್ಪಾತು, ಮು ।
ಕ್ತಿ ಸ್ತ್ರೀ ಚಿಂತೆ, ನಿಜಾತ್ಮ ಚಿಂತೆ ನಿಲವೇಳ್ಕಂತಲ್ಲದಾ ಶಾಸ್ತ್ರದಿಂ ॥
ದುಸ್ತ್ರೀ ಚಿಂತನೆ, ದುರ್ಮುಖಂ, ಕಲಹಮುಂ, ಗರ್ವಂ
ಮನಂಗೊಂಡೊಡಾ ।
ಶಾಸ್ತ್ರಂ ಶಸ್ತ್ರಮೆ ಶಾಸ್ತ್ರಿ ಶಸ್ತ್ರಿಕನಲಾ ರತ್ನಾಕರಾಧೀಶ್ವರಾ ॥೭೪॥

ವಿದ್ಯಾವಂತ ವೇಷಧಾರಿಗಳನ್ನು ಕಂಡು ರತ್ನಾಕರ ರೋಸಿ ಹೋಗಿರುವನು.

ತ್ರಿಜಗತ್ಸ್ವಾಮಿ ಜಿನೇಂದ್ರ ಬುದ್ಧ ಶಿವ ಲೋಕಾರಾಧ್ಯ ಸರ್ವಜ್ಞ ಶಂ ।
ಭು ಜಗನ್ನಾಥ ಜಗತ್ಪಿತಾಮಹ ಹರ ಶ್ರೀಕಾಂತ ವಾಣೀಶ ವಿ ।
ಷ್ಣು ಜಿತಾನಂಗ ಜಿನೇಶ ಪಶ್ಚಿಮಸಮುದ್ರಾಧೀಶ್ವರಾ ಬೇಗದಿಂ ।
ನಿಜಮಂ ತೋರು ದಯಾಳುವೇ ತಳಪಿಪೆಂ ರತ್ನಾಕರಾಧೀಶ್ವರಾ ॥೧೨೬॥

ರತ್ನಾಕರ ವಿಶ್ವತತ್ವವನ್ನು ಸಾರಿದ ವಿಶ್ವಕವಿ. ಈತನ ದರ್ಶನ ಕಾಲಾತೀತ ಹಾಗು ದೇಶಾತೀತ! ಲೋಕದ ಎಲ್ಲ ಧರ್ಮಗಳ ಅನುಯಾಯಿಗಳೂ ಒಪ್ಪುವಂತೆ ರತ್ನಾಕರ ಜಿನಧರ್ಮವನ್ನು ಪ್ರತಿಪಾದಿಸಿರುವನು. ಜೈನಧರ್ಮ ವಿಶ್ವಧರ್ಮವಾಗುವಂತೆ ಈ ವಿಶ್ವಕವಿ ಮತ್ತೊಮ್ಮೆ ಪರಿಷ್ಕಾರವೆಸಗಿರುವನು. ೧೨ ನೇ ಶತಮಾನದಿಂದೀಚೆಗೆ ಬಂದ ಕನ್ನಡಕವಿಗಳಲ್ಲಿ ಅನ್ಯಧರ್ಮವನ್ನು

ಅವಹೇಳನ ಮಾಡದೆ ಸ್ವಧರ್ಮದ ಮಹಿಮೆಯನ್ನು ಎಲ್ಲ ಮತೀ ಯರೂ ತಲೆದೂಗುವಂತೆ ಬಿತ್ತರಿಸಿದ ಪುಣ್ಯಾತ್ಮರೆಷ್ಟುಮಂದಿ ದೊರೆತಾರು ? ಹತ್ತುಸಹಸ್ರಕ್ಕೆ ಮಿಕ್ಕು ಪದ್ಯಪುಂಜವನ್ನು ಪೇ ಸಿದ ರತ್ನಾಕರ ಮಹಾಕವಿ ಅಪ್ಪಿತಪ್ಪಿಯಾವರೂ ಅನ್ಯಮತವನ್ನು ಅವಹೇಳನಮಾಡಿಲ್ಲವೆಂಬುದು ಕನ್ನಡಕ್ಕಂತು ಒಂದು ಪವಾ ಡವೇ ಸೈ !

ಭರತೇಶವೈಭವದಲ್ಲಿ ರತ್ನಾಕರನ ಪ್ರತಿಭೆಗೆ ಹೊಯ್‌ಕೈಯಾ ಗುವಂತೆ ಪ್ರತಿಷ್ಠೆಯೂ ಇದೆ. ತನಗಾಗದ ದಿಗಂಬರಯತಿಗಳನ್ನು ಇವನು ಕಟುವಾಗಿ ಟೀಕಿಸಿರುವನು.

ಅವರೊಂದು ತಿಂಗಳೋದಿದ ಶಾಸ್ತ್ರ ನನಗೊಂದು |
ದಿವಸದೊಳವಗತಿಯಹದು ||
ತವೆ ಬಾಹ್ಯ-ಜನರೊಳೀನೆಂದು ಬಿಟ್ಟನು | ಭವಿಸುತಿಹೆನು
ಹಂಸನೊಳಗೆ ||೧೦೨|| *
ಹರವರ ನುಡಿಯಿಲ್ಲದಾನಿರುತಿರ್ದೆನುಂ | ಡುರುಳಿ ಭಟ್ಟಾರಕರಂತೆ | 6
ನೆರಪಿಹೊತ್ತಗೆಗಳ ಹೊರೆಗಟ್ಟಿ ಭವಸೇನ 7 | ಗುರುಗಳಂತವರಾ
ತಿಹರು ||೧೦೩|| *

---

* ಭ. ವೈ. ಸಂ. ೮೦.

6 ಉಂಡುರುಳಿ ಭಟ್ಟಾರಕ—ಇವರ ಅಂತರಂಗ, ಭೇದವಿಜ್ಞಾನದ ಆಗರವಾಗಿತ್ತು. ವೀತರಾಗರಸಿಕರಾದ ಇಂಥವರನ್ನು ಭಾವಲಿಂಗಿ (ಅಂತರಂಗ ಸನ್ಯಾಸ ಇರುವವರು) ಎನ್ನುವರು. ಧ. ಅ, V ಆಶ್ವಾಸ.

7 ಭವಸೇನ ಮುನಿ—ಇವರು ಅಡಿಯಿಂದ ಮುಡಿತನಕ ದಿಗಂಬರ ರಾದರೂ ಅಂತರಂಗ ಪರಿಗ್ರಹ ಪೀಡಿತರಾಗಿದ್ದರು. ಇಂಥವರನ್ನು ದ್ರವ್ಯಲಿಂಗಿ (ಬಾಹ್ಯ ಸನ್ಯಾಸ) ಎನ್ನುವರು. ಧ. ಅ. V ಆಶ್ವಾಸ.

ಮೆಯ್ಯೊಳಿರ್ದಾತ್ಮನ ಬತ್ತಲೆಮಾಡಿನಾ | ಸೊಯ್ಯನೀಕ್ಷಿಸಿದರೆ ತಾವು ॥
ಮೈಯ ಬತ್ತಲೆಮಾಡಿ ಮನವಕತ್ತಲೆಮಾಡಿ | ಹುಯ್ಯಲಿಡುತ
ಸುತ್ತುತಿಹರು ||೧೦೩|| *

ಸನ್ಯಾಸ ಮದದಿಂದ ಬಿಗಿಸ್ದವರನ್ನು ರತ್ನಾಕರ ವಿಡಂಬನೆಯ ಚಾಟಿಯಿಂದ ಹೊಡೆದು ಎಚ್ಚರಿಸಿರುವನು. ಸಮಾಜದಲ್ಲಿದ್ದ ಕೊಳಚನ್ನು ತೊಡೆದುಹಾಕಿ ಸುಧಾರಣೆಯೆಸಗಲು 'ರತ್ನಾಕರ ಶತಕ'ದಲ್ಲಿ ಈ ಕವಿ ಕ್ರಾಂತಿಯ ಕಹಳೆಯನ್ನು ಊದಿರುವನು. 'ಅಪರಾಜಿತ ಶತಕ'ದ ರಚನಾ ಕಾಲದಲ್ಲಿ ರತ್ನಾಕರನಿಗೆ ಯಾರ ಗೊಡವೆಯೂ ಬೇಕಿಲ್ಲದಂತಾಗಿ ಆತ್ಮಾನುಸಂಧಾನದಲ್ಲಿ ತನ್ಮಯನಾಗಿರುವನು; ಅಪ್ಪಿತಪ್ಪಿ ಅನ್ಯಾಯವನ್ನು ಕಂಡಾಗ ರತ್ನಾಕರ ಸಹಾನುಭೂತಿಯಿಂದ ಮಾನವನ ಇತಿಮಿತಿಯನ್ನು ಪರಿಗಣಿಸಿ ತಿದ್ದಲು ಪ್ರಯತ್ನಿಸಿರುವನು. "ಸರ್ವಗುಣಂಗಳೊಳ್ ಸುಲಭರಾರ್ ಜಿನ ನೀಂ ಪೊರಗಾಗೆ? . . . . ನರಕೀಟಕಂಗಳೊಳ್ ಒರ್ವರೊಳಿರ್ದುದೊಂದು ಗುಣಮುಂ ಗುಣಕೋಟಿಯೆನುತ್ತೆ ಕಂಡು ತಾನುರ್ವಮಂಗೆ ನಿನ್ನ ಗುಣಮೊಲ್ದಿರವೇ ಅಪರಾಜಿತೇಶ್ವರಾ!"[8]—ನಿಕೃಷ್ಟ ಚೇತನದಲ್ಲೂ ಅಷ್ಟೋ ಇಷ್ಟೋ ಸಾತ್ವಿಕಾಂಶವನ್ನು ಕಾಣುವ ದಿವ್ಯಚಕ್ಷುವನ್ನು ರತ್ನಾಕರ ಈ ವೇಳೆಯಲ್ಲಿ ಪಡೆದಿರುವನು; ವಿಕಾರರಹಿತವಾದ ವಿಶ್ವಾನುಕಂಪ ಈತನಿಗೆ ಸಿದ್ಧಿಸಿದೆ. 'ಅಪರಾಜಿತೇಶ್ವರ ಶತಕ'ವನ್ನು ರತ್ನಾಕರ ವಯೋವೃದ್ಧ ಜ್ಞಾನವೃದ್ಧ ಹಾಗು ಶೀಲವೃದ್ಧನಾದ ಮೇಲೇ ಬರೆದಿರಬೇಕು. 'ರತ್ನಾಕರ ಶತಕ' ಗೃಹಸ್ಥರ ಚಾರಿತ್ರದಲ್ಲಿ ಕಂಡುಬಂದ ಕುಂದುಕೊರತೆಗಳನ್ನು ತಿದ್ದಲು ಬರೆದುದರಿಂದ

* ಭ. ವೈ. ಸಂ. ೮೦.

8 ಅ. ಶ. ೬೩.

ಇದನ್ನು 'ಸಾಗಾರ ಶತಕ' ವೆಂದು ಕರೆದರೆ ತಪ್ಪಾಗದು. 'ಅಪರಾಜಿತ ಶತಕ' ಹಂಸಾನುಭವಿಗಳಿಗಾಗಿ ಬರೆದುದರಿಂದ ಇದನ್ನು 'ಅನಾಗಾರ ಶತಕ' ವೆಂದು ಕರೆಯಬಹುದು.

'ರತ್ನಾಕರ ಶತಕ'ದ ಕೊನೆಕೊನೆಯ ಭಾಗ ಹಾಗು 'ಅಪರಾಜಿತೇಶ್ವರ ಶತಕ'ದ ಉದ್ದಗಲವಲ್ಲೂ ಹಬ್ಬಿಕೊಂಡಿರುವ ಭಕ್ತಿಗೀತಗಳಲ್ಲಿ ರಸಾವೇಶ ತುಂಬಿ ತುಳುಕಾಡಿದೆ. ಪರಮಾತ್ಮನ ಸಂದರ್ಶನಕ್ಕಾಗಿ ರತ್ನಾಕರ ಕಾತರಗೊಂಡು ಅಂಗಲಾಚುವಾಗ ಕಾವ್ಯರಸ ಬುಗ್ಗೆಯಾಗಿ ಚಿಮ್ಮಿದೆ.

"ನೀನಿರ್ದುಮಾನಿನ್ನೊಂದಕ್ಕೆಳಸಿರ್ಪನೇಕೆಯಕಟಾ ರತ್ನಾಕರಾಧೀಶ್ವರಾ!" [9] "ನೀನಾನೆಂಬರಿವಾಗೆ ಸಾಕು ............ ನಿನ್ನೆನ್ನ ಸಂಧಾನಂ ನಿತ್ಯಸುಖೈಕವಿನ್ನುಳಿದುವೇಂ ರತ್ನಾಕರಾಧೀಶ್ವರಾ!" [10] "............ ಬಿಡೆ ನಿಮ್ಮಂಘ್ರಿಗಳಂ ಬಿಡೆಂ ಉದಾರಂ ನೀನಹೋ ಬಲ್ಲೆನೆನ್ನೊಡೆಯಾ ರಕ್ಷಿಸು ರಕ್ಷಿಸಾ ತಳುವಿದೇಂ ರತ್ನಾಕರಾಧೀಶ್ವರಾ!" [11] "ಎಲೆ ಕಂದ ಕಡಂಗದಿರ್ ಇಂದು ನಾಳೆಯೆಮ್ಮಂದವೆಯಪ್ಪೆಯೆಂಬ ನುಡಿಗೇಳ್ವೆನೆಂದಪರಾಜಿತೇಶ್ವರಾ!" [12] "........ ಲೇಶಮಾದೊಡಂ ಪುದಿದ ಪುದ್ಗಲದಲಿರಲಾರೆನಯ್ಯ ಸರ್ವೇಶ ಶರಣ್ಯ ಗಣ್ಯ ತಳುವಿದೇಂ ಶರಣಾಗಪರಾಜಿತೇಶ್ವರಾ!" [13] "ನಿನ್ನೆಡೆಯನೆಯ್ದುವೆನೆಂದಪರಾಜಿತೇಶ್ವರಾ?" [14] ನೀರಲ್ಲಿ ಮುಳುಗುವ ಜೀವ ಗುಟುಕು ಗಾಳಿಗಾಗಿ ಅಂಗಲಾಚುವಂತೆ ರತ್ನಾಕರ ತಳಮಳಿಸಿರುವನು.

---

9 ರ. ಶ. ೧೨೩ 10 ರ. ಶ. ೧೨೪ 11 ರ. ಶ. ೧೨೫;
12 ಅ. ಶ. ೧೨೫; 13 ಅ. ಶ. ೧೨೭;
14 ಅ. ಶ. ೨೮.

ಅಪರಾಜಿತೇಶ್ವರ ಶತಕದಲ್ಲಿ ರತ್ನಾಕರನ ಹಂಸಾನುಭವ ಎದ್ದು ಕಾಣುವುದು.

ನೋಡುವ ನೋಡಿ ಲಾಲಿಸುವ ಲಾಲಿಸುತಾತ್ಮಸುಖಕೆ ವಿಸ್ಮಯಂ ।
ಮಾಡುವ ಮಾಡಿ ಮೆಚ್ಚುವ ನಿಜಾತ್ಮನೊಳಾಗಲೆ ಮೆಚ್ಚುತೈಕ್ಯದಿಂ ॥
ಕೂಡುವ ಕೂಡಿ ಮೆಯ್‌ಮರೆವ ತನ್ಮಯನಾಗುತೆ ತಾನೆ ತನ್ನೊಳೋ
ಲಾಡುವ ಜೋಗಿಯೇ ಅಮೃತಭಾಗಿಯಲಾ ಅಪರಾಜಿತೇಶ್ವರಾ ॥೧೧೭॥

ಅನುಭಾವಿಯಾದ ರತ್ನಾಕರ ಇಲ್ಲಿ ಬ್ರಹ್ಮಾದ್ವೈತ ನಾಟ್ಯವಾಡಿರುವನು! ಆತ್ಮಾನಂದವೆಂಬ ಶಿಶುವನ್ನು ಓಂಕಾರದ ಹಂಸತೂಲಿಕಾತಲ್ಪದಲ್ಲಿಟ್ಟು ರತ್ನಾಕರಯೋಗಿ ತೂಗುತ್ತಿರುವಂತೆ ಇದೆಯಲ್ಲ ಇಲ್ಲಿಯ ಛಂದೋವಿಲಾಸ!

ಚಲುವರ ಚಲ್ವ ಚೆನ್ನಿಗರ ಚೆನ್ನ ಸುವೀರರ ವೀರ ಸತ್ಕಲಾ ।
ಬಲರ ಬಲಾಢ್ಯ ಬಲ್ಲಿದರ ಬಲ್ಲಹ ದೇವರ ದೇವ ನೀತಿ ನಿ ॥
ರ್ಮಲರ ನಿಧಾನ ನಿಚ್ಚ ಮದುವಕ್ಕಳ ಮಾಣಿಕಕಾಂತಿ ಶಾಂತಿ ಶೀ ।
ತಲರ ಶಿರೋಮಣೀ ನಿನಗೆ ಪಾಸಾಟಿಯಾರಪರಾಜಿತೇಶ್ವರಾ ॥೧೨೪॥

ಜಿನಶಿಶುವಿನ ಜನ್ಮಾಭಿಷೇಕ ಕಲ್ಯಾಣದಲ್ಲಿ ಮಗುವನ್ನು ತೊಟ್ಟಿಲಲ್ಲಿಟ್ಟು ದೇವಕನ್ನೆಯರು ಜೋಗುಳ ಹಾಡುವಂತಿದೆ ಇಲ್ಲಿಯ ಮಂಜುಳನಾದ!

'ತ್ರಿಲೋಕ ಶತಕ'ದ ಶೈಲಿ ಸುಂದರವಾದುದಲ್ಲವಾದರೂ ಸರಳವಾಗಿದೆ. ಮೂರುಲೋಕದ ಸ್ವರೂಪವನ್ನು ಅತ್ಯಂತ ಸ್ಥೂಲವಾಗಿ ನಿರೂಪಿಸಿದ್ದರೂ ಪ್ರಮುಖಾಂಶಗಳಿಗೆ ಇದರಲ್ಲಿ ಲೋಪ ಬಂದಿಲ್ಲ. ರತ್ನಾಕರನ ಉಳಿದ ಕೃತಿಗಳಿಗೆ ಹೋಲಿಸಿದಾಗ 'ತ್ರಿಲೋಕ ಶತಕ' ಕಳಪೆಯಾಗಿ ಕಂಡರೂ ಕನ್ನಡ ಕಾವ್ಯಗಳಲ್ಲಿ ಇದುವರೆವಿಗೆ ಬಂದಿರುವ ತ್ರಿಲೋಕ ವಿವರಣೆಯ ದೃಷ್ಟಿಯಿಂದ

ನೋಡಿದಾಗ ರತ್ನಾಕರನ 'ತ್ರಿಲೋಕ ಶತಕ' ತುಂಬ ಉಪ ಯುಕ್ತವಾಗಿದೆ.

ವಿಜಯನಗರದಲ್ಲಿ ಸುವರ್ಣವೃಷ್ಟಿಯಾದುದು ನಿಜವೋ ಸುಳ್ಳೋ ಕಂಡವರಾರು? ಆದರೆ ರತ್ನಾಕರನ ಕಾವ್ಯದಲ್ಲಿ ಬಂಗಾರಕ್ಕೆ ಬಡತನವಿಲ್ಲ. ನವರತ್ನಗಳೂ ರತ್ನಾಕರನಿಗೆ ದಿನಬಳಕೆಯ ಹರಳಾಗಿ ಹೋಗಿವೆ. ವಿಜಯನಗರ ಸಾಮ್ರಾಜ್ಯದ ಇಳಿಗಾಲದಲ್ಲಿ ರತ್ನಾಕರ ಬಾಳಿದ್ದರೂ ಅಂದಿಗೆ ದಕ್ಷಿಣಕನ್ನಡ ಜಿಲ್ಲೆಯು ತುಂಬ ಜೈನ ಶ್ರೀಮಂತರಿದ್ದರು; ಜೈನ ಮನೆತನದ ಮಹಾರಾಜರುಗಳಿದ್ದರು ಜೈನಮಠಗಳಲ್ಲಿ ಲಕ್ಷ್ಮಿ ಕಾಲ್ಮುರಿದು ಕುಳಿತಿದ್ದಳು. ಅರಸುಮನೆತನದವನಾದ ರತ್ನಾಕರನೂ ಐಶ್ವರ್ಯದ ನಡುವೆಯೇ ಜನಿಸಿ ಅದರ ಜೊತೆಯಲ್ಲೇ ಬೆಳೆದು ಬೆಳಕಿಗೆ ಬಂದಿರಬೇಕು. ಜನತೆ ರಾಗರಸಿಕರಾಗಿ ಬಾಳಿ ವೀತ ರಾಗರಸಿಕತೆಗಾಗಿ ಅರಸುತ್ತಿದ್ದ ಶುಭಕಾಲದಲ್ಲಿ ಈ ಮಹಾಕವಿ ಭರತೇಶ ವೈಭವವನ್ನು ರಚಿಸಿದಂತಿದೆ. ಇಲ್ಲಿನ ಆದರ್ಶ ದಾಂಪತ್ಯ, ಸವತಿ ಮಾತ್ಸರ್ಯ ರಹಿತವಾದ ಬಹುಪತ್ನಿತ್ವ. ಅತ್ತೆ ಸೊಸೆಯರ ಅನ್ಯೋನ್ಯ; ಅತ್ತೆಯನ್ನು ಸೊಸೆಯರೆಲ್ಲ ಕಲೆತು ತೊಟ್ಟಿಲಲ್ಲಿ ಕೂರಿಸಿ ತೂಗುವ ಆನಂದಮಯವಾದ ದೃಶ್ಯ, ಅತಿಯಾಗಿ ಉಪವಾಸವ್ರತ ಆಚರಿಸಿ ಸೊರಗಿದಿರಲ್ಲ ಎಂದು ಸೊಸೆಯರನ್ನು ಕಂಡು ತಳ್ಳಂಕಗೊಳ್ಳುವ ಅತ್ತೆಯ ವಾತ್ಸಲ್ಯ, ಸರಸಿಗಳೂ ಶಾಂತಿಪ್ರಿಯರೂ ಆದ ಸದ್ಗೃಹಸ್ಥರ ಸಮೂಹ ಇವನ್ನೆಲ್ಲ ಕಂಡರೆ ಭರತೇಶವೈಭವದಲ್ಲಿ ಮಾತ್ರ ಕಂಡೇವು! ಸರ್ವಧರ್ಮಸಮನ್ವಯದೃಷ್ಟಿ ರತ್ನಾಕರನ ಅಂತರ್ದೃಷ್ಟಿಯಾಗಿ ಈತನ ಕೃತಿಗಳು ಜಗತ್‌ಕೃತಿಗಳಾಗಿವೆ.

ರತ್ನಾಕರ ಕನ್ನಡಭಾಷೆಗೆ ಹೊಸಹೊಸ ನುಡಿಮುತ್ತಿನ ಕುಚ್ಚನ್ನು ಅರ್ಪಿಸುವುದರ ಜೊತೆಗೆ, ಬಹುಜನ ಮತ್ತೆ ಪತೆ

ಬಳಸಿ ಸವಕಲಾಗಿ ಸತ್ವಹೀನವಾಗಿದ್ದ ಮಾತಿನಮಾಲೆಗೆ ಈ ಕವಿ ನವನೂತನ ಹೊಳಪನ್ನೂ ಕಮನೀಯವಾದ ಕನ್ನಡದ ಕಂಪನ್ನೂ ಪ್ರತಿಭಾಸ್ಪರ್ಶದ ಪೆಂಪನ್ನೂ ಕೊಟ್ಟು ಅವನ್ನೆಲ್ಲ ಸಪ್ರಾಣಗೊಳಿಸಿರುವನು! ಅನುಕರಣ ಪದಪುಂಜವನ್ನು ಪರಿಣಾಮಕಾರಿಯಾಗಿ ಬಳಸಿ ಕನ್ನಡಸಿರಿಯನ್ನು ಹೆಚ್ಚಿಸಿರುವನು. ಅಚ್ಚಕನ್ನಡ ನುಡಿಯಲ್ಲೂ ಸುಖೋಷ್ಣವಾದ ಶ್ಲೇಷೆಯನ್ನು ತಂದು ದೇಶೀಯ ಗೌರವವನ್ನು ಮಾರ್ಗದ ಮಟ್ಟಕ್ಕೇರಿಸಲು ಪ್ರಯತ್ನಿಸಿರುವನು. ಜನಪದ ಧಾಟಿಯಲ್ಲಿ ದಿನಬಳಕೆಯ ಮಾತುಗಳಿಂದ ದಿನಚರಿಯ ಬದುಕನ್ನು ರತ್ನಾಕರ ಬಣ್ಣಿಸಿ ಮಹಾಕಾವ್ಯವನ್ನು ರಚಿಸಿದುದಕ್ಕಿಂತ ಕನ್ನಡನುಡಿಯ ಬೆಳವಣಿಗೆಗೆ ಬೇರೆ ಉಪಕಾರ ಬೇಕೆ? "ಮಾತುತಾನೆ ಮನದೊಳಗ ಸೂಚಿಸುವುದು"[1] "ಉಂಡವ ತೇಗುವಂತೆ ಆತ್ಮನ ಭಾವಿಸಿ ಕಂಡವನು ಹೇಳಬೇಕು"[2] ನಾವಿಪ್ಪ ಸದನವೆಲ್ಲವು ಡೊಂಕು ನಮ್ಮ ಹೃದಯವಿನ್ನೆಷ್ಟು ಡೊಂಕೋ!"[3] "ಪತಿಗುತ್ತರವ ಕೊಡಬಾರದು ಕೈಕೊಂಡ ವ್ರತವ ಕೆಡಿಸಬಾರದು"[4] "ಅರುವೆಯ ಬಿಸುಟರೆ ತಪಸಿಯೆ? ಹೆರೆ ಬಿಟ್ಟರರೆಗೋಲೆ ವಿಷ ಹೋಯ್ತೆ ಫಣಿಗೆ?"[5] "ಮೈ ಬತ್ತಲೆಮಾಡಿ ಮನವ ಕತ್ತಲೆ ಮಾಡಿ"[6] "ಲೇಪವಳಿದರೆ ಸರ್ವರು ಸರಿ"[7] "ಹೆಣ್ಣು ಬೇಕಾದರೆ ಬರಬೇಕು! ನಾವೆಮ್ಮ ಬಣ್ಣಿಗೆದಪ್ಪಿ ಕೊಡುವೆವೆ?"[8] "ಎಳೆಯೆಂಬ

---

[1] ಭ. ವೈ ಸಂ. ೨, ಪ ೮೮; [2] ಭ. ವೈ, ಸಂ. ೨, ಪ. ೯೬; [3] ಭ. ವೈ. ಸಂ. ೩, ಪ. ೭೦; [4] ಭ. ವೈ. ಸಂ. ೪, ಪ. ೩೬; [5] ಭ. ವೈ. ಸಂ. ೫೪, ಪ. ೧೯; [6] ಭ. ವೈ. ಸಂ. ೮೦, ಪ. ೧೦೩; [7] ಭ. ವೈ. ಸಂ. ೫೪, ಪ. ೯೫; [8] ಭ. ವೈ. ಸಂ. ೩೭, ಪ. ೪೮.

ರಾಯಗೆ ತುಳಿಯೆಂಬ ಮಂತ್ರಿ!"[9] "ಕಡಲನೊತ್ತದೆ ಕಡಲುದ್ಧ ಕವ ತುಂಬುವ ಕೊಡನನೊತ್ತುವರಂತೆ"[10] "ಲೇಸಿಗೆ ಕಾಲಿ ಗೆರಗಬಹುದರಸ, ಉದಾಸೀನಕೆ ಆರೆರಗುವರು?"[11] ಅಚ್ಚ ಕನ್ನಡ ನುಡಿಯ ಕಟ್ಟಾಣಿ ಮುತ್ತುಗಳಿಂದ, ಕನ್ನಡ ಕಂಪಿನ ಬಿರಿ ಮುಗುಳ ಮಾತಿನ ಮಾಲೆಯಿಂದ ರತ್ನಾಕರ ಕನ್ನಡಾಂಬೆಯನ್ನು ಸಿಂಗರಿಸಿರುವನು!

"ಭರತೇಶವೈಭವದಲ್ಲಿ ತ್ಯಾಗ ಭೋಗಗಳ ಸಮನ್ವಯದ ಯೋಗದರ್ಶನವನ್ನು ಕವಿ ಸುಂದರವಾಗಿ ಪ್ರತಿಮಿಸಿದ್ದಾನೆ. ಅಷ್ಟೆ ಅಲ್ಲ, ಕವಿ ಆ ದರ್ಶನವನ್ನು ಭರತನ ಜೀವನದಲ್ಲಿ ಮಾತ್ರವೇ ಅಲ್ಲದೆ ಇಡೀ ಕಾವ್ಯದ ವಿವರ ವಿವರಗಳಲ್ಲಿಯೂ ಬುದ್ಧಿಪೂರ್ವಕವಾಗಿ ಪ್ರತಿಮಿಸಿರುವುದನ್ನು ನೋಡಿದರಂತೂ ಇಂತಹ ಕಾವ್ಯಸೃಷ್ಟಿ ಜಗತ್ತಿನ ಮತ್ತಾವ ಸಾಹಿತ್ಯದಲ್ಲೂ ಆಗಿರುವಂತೆ ಕಾಣುವುದಿಲ್ಲ. ಆ ದೃಷ್ಟಿಯಿಂದ ಇದು ಜಗತ್ ಕೃತಿ ...........". † "ಶಿಲ್ಪ ಗಾಯನ ನಾಟ್ಯ ವಾದ್ಯಘೋಷ ಸರಸಸಲ್ಲಾಪ ಪ್ರಣಯಪ್ರವೃತ್ತಿ ಗಳನ್ನು ರತ್ನಾಕರನಂತೆ ಚಿತ್ರಿಸುವ ಪ್ರಾಯಶಃ ಚಿತ್ರಿಸಬಲ್ಲ ಕವಿ ಗಳು ಕನ್ನಡದಲ್ಲಿ ಅಪರೂಪ. ಬಹುಶಃ ಅವನಿಗೇ ಅರ್ಪಿತವಾಗ ತಕ್ಕದ್ದು ಅಗ್ರತಾಂಬೂಲ, ಹೀಗೆನ್ನುವಾಗ ಪಂಪ ರನ್ನ ಕುಮಾರ ವ್ಯಾಸ ಇವರನ್ನು ನಾನು ಮರೆತಿಲ್ಲ". † "ರತ್ನಾಕರನ ಬರವಣಿ ಗೆಯ ಓಘದಲ್ಲಿ ಸರಸ್ವತಿಯ ಪ್ರಸನ್ನತೆಯಿದೆ, ನಿರ್ಮಲತೆಯಿದೆ, ದರ್ಶನದ ಉನ್ನತಿ ವ್ಯಕ್ತಿಯ ಉದಾತ್ತತೆ ಇವನ್ನು ಚಿತ್ರಿಸುವ ಭಾಷೆ ಮತ್ತು ನುಡಿಯುವ ಛಂದ ಎಷ್ಟು ಸರಳವೋ ಅಷ್ಟು ಭವ್ಯ

---

[9] ಭ. ವೈ. ಸಂ. ೧೪, ಪ. ೮೨; [10] ಭ. ವೈ. ಸಂ. ೧೪, ಪ. ೮೩; [11] ಭ. ವೈ. ಸಂ. ೧೪, ಪ. ೯೭. † ಶ್ರೀ ಕುವೆಂಪು, ಭ. ವೈ. ಸಂ. ಮು. I. † ಶ್ರೀ. ಎಸ್. ವಿ. ರಂಗಣ್ಣ, ಶೈಲಿ II ಪು ೧೩೧-೩೧.

ವಾಗಿದೆ." * "ತತ್ವವನ್ನೂ ರಸಿಕತೆಯನ್ನೂ ಬೆರೆಸಿ ಯೋಗ ಭೋಗ ಸಮನ್ವಯವನ್ನು ನಮ್ಮೆದುರಿಗೆ ಒಂದು ಜೀವನತತ್ವವೆಂದು, ಕಾವ್ಯವೆಂದು, ಭರತೇಶನಂಥ ಆದರ್ಶ ಪುರುಷನೆಂದು ನಿಲ್ಲಿಸಿದ್ದು ಆತನ ಅಜರಾಮರ ಕೀರ್ತಿಯಾಗಿದೆ." ‡ ಭಾಮಿನೀ ಷಟ್ಪದಿಗೆ ಕುಮಾರವ್ಯಾಸನು ಹೇಗೋ ರಗಳೆಗೆ ಹರಿಹರನು ಹೇಗೋ ಸಾಂಗತ್ಯಕ್ಕೆ ರತ್ನಾಕರನೂ ಹಾಗೆ. ಆಯಾ ಛಂದಸ್ಸಿಗೆ ಅವರವರು ಸಾಮ್ರಾಟರು!" [1]

ಸಹಸ್ರವರ್ಷದ ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ರತ್ನಾಕರನ ಭುಜಕ್ಕೆ ಭುಜ ಅನಿಸಿಕೊಂಡು ನಿಲ್ಲಬಲ್ಲ ಕವಿಗಳು ಇಬ್ಬರೊ ಮೂವರೊ ದೊರೆತರೂ ನಾವು ಪುಣ್ಯವಂತರೆ. ವೀರ ರೌದ್ರ ಭಯಾನಕ ರಸಗಳನ್ನು ಚಿತ್ರಿಸುವಾಗ ರತ್ನಾಕರ ಸಪ್ಪೆಯಾಗಿರುವುದು ನಿಜವಾದರೂ ತನ್ನ ಬೃಹತ್ ಕವಿತಾದೇಗುಲಕ್ಕೆ ಭೇದ ವಿಜ್ಞಾನದ ಬುನಾದಿ ಹಾಕಿ ಹಂಸಕಲೆಯ ಕಲಶವೇರಿಸಿ ಇವನು ಉಳಿದೆಲ್ಲ ಕನ್ನಡ ಕವಿಗಳನ್ನೂ ಮೀರಿರುವನು. ಕನ್ನಡಿಗರು ರತ್ನಾಕರ ಕವಿಯನ್ನು ಎಷ್ಟು ಓದಬಹುದಾಗಿತ್ತೋ ಅಷ್ಟು ಓದಿಲ್ಲವೆಂದು ಸಂಕಟದಿಂದ ಹೇಳಬೇಕಾಗಿದೆ. ಪಂಪ, ಕುಮಾರವ್ಯಾಸ, ಹರಿಹರ—ಈ ಮಹಾಕವಿಗಳ ಮೇಲೆ ನಡೆದಷ್ಟು ಸಂಶೋಧನೆಯಾಗಲೀ, ಅವರ ಮೇಲೆ ಬರೆದಷ್ಟು ಲೇಖನಗಳಾಗಲಿ ರತ್ನಾಕರ ಕವಿಯ ಮೇಲೆ ನಡೆದಿಲ್ಲ ಹಾಗು ಬರೆದಿಲ್ಲ. ಇಷ್ಟಾದರೂ ರತ್ನಾಕರ ಕವಿ ದಿನದಿನಕ್ಕೂ ಪ್ರಾಂತ್ಯ ಪ್ರಾಂತ್ಯಗಳನ್ನು ಧರ್ಮ ದಿಗ್ವಿಜಯವೆಸಗಿ ವಿಜೃಂಭಿಸುತ್ತಿರುವನು. ಈತನ

* ಶ್ರೀ. ರಂ. ಶ್ರೀ. ಮುಗಳಿ, ಕ. ಸಾ. ಚ. ಪು. ೩೯೫.

‡ ಶ್ರೀ. ವಿ. ಗೋಕಾಕರು, ಸಾ. ಹಾ. ಕಾ. ಜೀ. ಪು. ೧೦೭.

[1] ಶ್ರೀ. ತ. ಸು. ಶಾಮರಾಯರು, ಭ. ವೈ. ಸಂ. ಪೀ. ಪು. ೯೮.

ಕೃತಿಗಳೆಲ್ಲ ಹಿಂದೀ ಭಾಷೆಗೂ, ಆಂಗ್ಲ ಭಾಷೆಗೂ, ಮರಾಠಿ ಗುಜರಾತಿ ಭಾಷೆಗಳಿಗೂ ಈಗಾಗಲೆ ಭಾಷಾಂತರಗೊಂಡಿವೆ.[12] ಕನ್ನಡದಲ್ಲಿ ಇಷ್ಟೊಂದು ವ್ಯಾಪಕತೆ ಪಡೆದ ಕವಿಗಳು ಎಷ್ಟು ಜನ ದೊರೆತಾರು? ರತ್ನಾಕರ ಕೇವಲ ಕನ್ನಡಕ್ಕೆ ಮಾತ್ರ ಪರಿಮಿತಿಗೊಳ್ಳುವ ಕವಿಯಲ್ಲ. ಭೇದವಿಜ್ಞಾನ ಹಾಗು ಹಂಸಕಲೆ ಈತನ ಅಪೂರ್ವ ದರ್ಶನವಾದ ಯೋಗ ಭೋಗ ಸಮನ್ವಯಕ್ಕೆ ಸಿದ್ಧರಸದ ಸ್ಪರ್ಶನವನ್ನಿತ್ತುದರಿಂದ ಈತನ ಘನತತ್ವಗಳೆಲ್ಲ ವಿಶ್ವತತ್ವಗಳಾಗಿ ವಿರಾಜಿಸಿವೆ. ಈತನ ತತ್ವಗಳು ವಿಶ್ವತತ್ವಗಳಾಗಿ ಅವು ವಿಶ್ವಕ್ಕೆಲ್ಲ ಬೇಕಾಗಿರುವುದರಿಂದ ರತ್ನಾಕರ ವಿಶ್ವಕವಿಯಾಗಿರುವನು!

---

12 'ಶ್ರೀ ಆಚಾರ್ಯ ದೇಶಭೂಷಣ ಮುನಿಮಹಾರಾಜ'ರ ಗ್ರಂಥಮಾಲೆಯ ೯ ನೇ ಪುಷ್ಪವಾಗಿ ಭರತೇಶವೈಭವದ ಮೂಲ ಪದ್ಯಗಳು ದೇವನಾಗರೀ ಲಿಪಿಯಲ್ಲೂ ಅದರಡಿ ಹಿಂದಿ ಹಾಗು ಆಂಗ್ಲ ಭಾಷೆಯ ಅನುವಾದವೂ ಇದ್ದು ಭರತೇಶವೈಭವ ಮುಪ್ಪಡಿಯಾಗಿ ನಾಲ್ಮಡಿಯಾಗಿ ಹಿಗ್ಗಿಹೋಗಿದೆ! ಈ ಮಾಲೆಯಲ್ಲೇ ಶತಕಗಳೂ ಮೇಲಿನ ಮಾದರಿಯಲ್ಲೇ ಅಚ್ಚಾಗಿವೆ.

ಇನ್ನೊಂದುಕಡೆ ಶ್ರೀ ವರ್ಧಮಾನ ಪಾರ್ಶ್ವನಾಥಶಾಸ್ತ್ರಿಗಳು ರತ್ನಾಕರನ ಕೃತಿಗಳನ್ನೆಲ್ಲ ಹಿಂದಿಯಲ್ಲಿ ತರ್ಜುಮೆ ಮಾಡಿರುವರು; ಇಲ್ಲಿಂದ ರತ್ನಾಕರ ಗುಜರಾತಿಗೂ ಮರಾಠಿಗೂ ಕಾಲಿಟ್ಟಿರುವನು.

ಇವಲ್ಲದೆ, ಶ್ರೀ ಜಿ. ಬ್ರಹ್ಮಪ್ಪ ಹಾಗೂ ಶ್ರೀ ಎಂ. ಪಿ. ಶ್ರೀನಿವಾಸ ಇವರು ರತ್ನಾಕರನ ಜೀವನ ಹಾಗೂ ಸಾಧನೆಯ ರಹಸ್ಯವನ್ನು ಕುರಿತು ಕನ್ನಡದಲ್ಲಿ ಬರೆದ 'ರತ್ನಾಕರ' ಕಾದಂಬರಿಯನ್ನು ಡಾ|| ಎಸ್. ಎಸ್. ದಕ್ಷಿಣಾಮೂರ್ತಿಯವರು ಹಿಂದಿ ಭಾಷೆಗೆ ಅನುವಾದ ಮಾಡಿರುವರು. ಈ ಕೃತಿಯೂ ಅಚ್ಚಾಗಿದೆ.

# ರತ್ನಾಕರನ ಅಧ್ಯಾತ್ಮ ಗೀತೆಗಳು

ಇತ್ತೀಚೆಗೆ ರತ್ನಾಕರನ ಅಧ್ಯಾತ್ಮ ಗೀತೆಗಳಲ್ಲಿ ಕೆಲವು ಸಿಕ್ಕಿವೆ. ಭುವನಹಳ್ಳಿಯ ಶ್ರೀ ಡಿ. ಶ್ರೀಪತಿಯವರು ೯ಳ ಗೀತೆಗಳನ್ನು ಸಂಶೋಧಿಸಿ ಅಚ್ಚುಮಾಡಿಸಿರುವರು. ಮೂಡಬಿದ್ರೆಯಲ್ಲಿ ೩೯ ಗೀತೆಗಳು ದೊರೆತಿವೆ. ಇವಕ್ಕೆ ಸಂಗೀತಶಾಸ್ತ್ರಾನುಸಾರ ಪ್ರಸ್ತಾರ ಹಾಕಿ ಶ್ರೀ ಎಂ. ಜಗತ್ಪಾಲಯ್ಯನವರು ಅಚ್ಚುಮಾಡಿಸಿರುವರು.

## ರತ್ನಾಕರನ ಕೀರ್ತನೆಗಳು

ಇಂದ್ರಿಯಕೆ ಸಿಕ್ಕಿ ನೊಂದೆನಯ್ಯ ಗುರುವೆ, ಮಾ-
ಹೇಂದ್ರಕೀರ್ತಿ ಕಾಯೋ ಕರುಣದ ತರುವೆ ||ಪಲ್ಲವಿ||

ಕಣ್ಣಸವಿಗಾಗಿ ಕಂಡಲ್ಲಿ ಹಾರಿ, ಎಳೆ
ವೆಣ್ಣಿಗೆ ಬಯಸಿ ಭ್ರಾಂತಿ ತಲೆಗೇರಿ
ಉಣ್ಣದ ನೋವನುಂಡು ನಲವೇರಿ | ಸಲೆ
ಬಣ್ಣವಳಿದನ ಕಾಯೋ ಮತಿದೋರಿ ||೧||

ಎರವಿನ ಬಾಳೆಂಬುದನರಿದೂ | ನಿಚ್ಚ |
ಪರಲೋಕ ಚಿಂತೆಯ ಮರೆದು
ನರನೀ ನಾಟಕದಲ್ಲಿ ಬಿದಿಮೆರೆದು, ಬೇಗೆ
ವರಿದನ ಕಾಯೋ ಶಾಂತರಸವೆರೆದು ||೨||

ಯೋಗಾನಂದ ಉಪದೇಶ ಚಕ್ರವರ್ತಿ, ಎನ್ನ-
ಲಾಗುಮಾಡಿ ಸಲಹೋ ನಿನಗದು ಕೀರ್ತಿ
ರಾಗದ್ವೇಷವಳಿದ ಸುಜ್ಞಾನಮೂರ್ತಿ, ದಿವ್ಯ-
ಯೋಗಿ ಮುಕ್ತಿಗಾಣಿಸೋ ಮಾಹೇಂದ್ರಕೀರ್ತಿ ||೩|| [1]

---

1 ರ. ಕೀ. ಪು. ೩.

ಇಲ್ಲಿ ರತ್ನಾಕರ ಆತ್ಮಪರಿಶೋಧನೆಯನ್ನು ಮಾಡಿಕೊಂಡು ಪರಿತಪಿಸಿರುವನು. ಸದ್ಗುರುವಿನ ಪಾದಮೂಲದಲ್ಲಿ ಕಂಬನಿಹರಿಸಿ ಆತ್ಮೋದ್ಧಾರಕ್ಕಾಗಿ ಹಂಬಲಿಸಿರುವನು. ಮಾರ್ಗದರ್ಶನ ಮಾಡಬೇಕೆಂದು ಅಂಗಲಾಚಿರುವನು— ರತ್ನಾಕರಶತಕದಲ್ಲೂ ಮಹೇಂದ್ರಕೀರ್ತಿಗಳ ವ್ಯಕ್ತಿತ್ವಕ್ಕೆ ರತ್ನಾಕರ ಮಾರು ಹೋಗಿರುವುದನ್ನು ನಾವು ಕಾಣಬಹುದು.

ಶ್ರುತಮಂ ನೋಳ್ಪ ತದರ್ಥಮಂ ತಿಳಿಪ ತನ್ಮರ್ಯಾದೆ
ಯೊಳ್ಪೋಪ ಸು।
ವ್ರತಮಂ ಪಾಲಿಪ ಕಾಮಮಂ ತುಳಿವ ಮಾಯಾ
ಜಾಡ್ಯಮಂ ಝಾಡಿ ಪು ॥
ನ್ನತ ಕಾರುಣ್ಯದೊಳಾಳ್ವ ಜೀವಹಿತಮಂ ಪೇಳ್ವಾತನೇ
ಮದ್ಗುರು ।
ಶ್ರುತ ಯೋಗೀಶ್ವರನಿಂದು ನಾಳಿನ ಶಿವಂ ರತ್ನಾಕರಾಧೀಶ್ವರಾ ॥[2]

ಪರಸಂತೋಷಮೆ ಸೌಖ್ಯಮೆಂಬ ಪರದುಃಖಂ ತನ್ನನೋವೆಂಬ-
ತಾಂ ।
ಪರನೆಂಬಂದಮನಿಂತುಟೆಂಬ ಪರಲೋಕಂ ತನ್ನ ನಾಡೆಂಬ ತ ।
ತ್ಪರಮಜ್ಞಾನಿ ಜಗದ್ಗುರುಂ ಮದುಗುರುಂ ದೇವೇಂದ್ರಕೀರ್ತಿ-
ವ್ರತೀ ।
ಶ್ವರನಾತಂ ಪೆರನಲ್ತು ನೀನೆ ಪಲವೇಂ ರತ್ನಾಕರಾಧೀಶ್ವರಾ ॥ [3]

ರತ್ನಾಕರನ ಕೀರ್ತನೆಗಳಲ್ಲಿ "ಯೋಗಾನಂದ ಉಪದೇಶ ಚಕ್ರವರ್ತಿ" ಯಾಗಿರುವ ಮಹೇಂದ್ರಕೀರ್ತಿಗಳನ್ನು ಶತಕದಲ್ಲಿ

---

2 ರ. ಶ. ೧೦೭. 3 ರ. ಶ. ೧೦೮

"ಶ್ರುತಯೋಗೀಶ್ವರ" "ಪರಮ ಜ್ಞಾನಿ ಜಗದ್ಗುರು" ಎಂದು ರತ್ನಾಕರ ಭಕ್ತಿಯಿಂದ ಕೊಂಡಾಡಿರುವನು.

ಭರತೇಶ್ವರ ಮುನ್ನ ತನ್ನದೆಂದಾಳ್ದನೀ ।
ಧರೆಯು, ಮತ್ತಾಳ್ದ ಸಗರೇಂದ್ರ
ಪರಶುರಾಮನು ಸುಭೌಮನಾರಾವಣ ರಘು-
ಜರು ಪಾಂಡವರು ಆಳಿದರು ॥

ನೆರೆದಾಳ್ದ ರಾಜ ವಿಟರುಗಳೆಲ್ಲ ಹೋದರೂ
ಧರೆಯೆಂಬ ಗಣಿಕೆ ಹೋಗಲಿಲ್ಲ
ಅರರೆ! ಮತ್ತೀಗಳೊ ಎನಗೆ ತನಗೆಂದೊದ
ರಿರಿದಾಡುತಿದೇಕೊ! ಜಗವೆಲ್ಲ ॥ 4

ನೆಲದಾಸೆಗೆ ಬಿದ್ದು ಮಾನವೀಯತೆಗೆ ತಿಲಾಂಜಲಿ ಕೊಟ್ಟು ಹಂದಿ ನಾಯಿಗಳಂತೆ ಕಚ್ಚಾಡುವ ರಾಜಮಹಾರಾಜರನ್ನು ಕಂಡು ರತ್ನಾಕರ ಕೊಕ್ಕರಿಸಿರುವನು. ಷಟ್ ಖಂಡಾಧಿಪತಿಗಳ ನೆನಪು ಮಾಡಿಕೊಟ್ಟು ಬುದ್ಧಿಹೇಳಿರುವನು.

ಇಂದಾದೆಯೊ ? ನೆನ್ನೆಮೊನ್ನೆಯಾದೆಯೊ ? ನೀ
ಹಿಂದಾದ ಯುಗಕೆ ಗಡಿಯಿಲ್ಲ!
ಅಂದಿಂದ ಹೊತ್ತ ಮೈ ಸತಿಸುತರು ಸಿರಿ ಕನಸಿ-
ನಂದದಿ ಮಾಯವಾದುದರಿಯ ॥೫॥

ಮುಂದಾದರೆಚ್ಚರೈ! ನೀ ಪರಬ್ರಹ್ಮ ಪ್ರಾಭೃತ-
ದಂದವರಿತು ತಪಸುಮಾಡು
ಕರ್ಮಗಳಳಿದು ಕೈವಲ್ಯತಾನದು ಶ್ರೀ-
ಮಂದರಸ್ವಾಮಿ ಮೆಚ್ಚುವನು ॥ 5

---

4 ರ. ಕೀ. ಪು ೮. 5 ರ. ಕೀ. ಪು. ೯.

ಜೀವಿಯ ಅನಂತ ಜನುಮಗಳ ಪರದಾಟವನ್ನು ರತ್ನಾಕರ ಇಲ್ಲಿ ನೆನಪುಮಾಡಿರುವನು. ಶ್ರೀ ಮಂದರಸ್ವಾಮಿಯ ಕೃಪಾ ಕಟಾಕ್ಷ ಪಡೆಯಲು ಮಾರ್ಗದರ್ಶನ ಮಾಡಿರುವನು.

“ ಇಂದಾನಾದವನೇ ಸಮಂತು ಬರಿಸಂ ನೂರೊಂದಹಂ
ಕೋಟಿಯಿಂ ಹಿಂದತ್ತತ್ತಲನೇಕ ಕೋಟಿಯುಗದಿಂದ
ತ್ತತ್ತಲಂಭೋಧಿಯಿಂ ಬಂದತ್ತತ್ತಲನಾದಿ ಕಾಲ
ದಿನನಂತಾಕಾರದಿಂ ತಿರ್ರಿನಲ್ ಬಂದೆಂ ! ” [6]

ರತ್ನಾಕರ ಶತಕದ ರಚನೆಯ ಕಾಲದಲ್ಲಿ ಕವಿಯ ಮನೋಭೂಮಿಕೆ ಜ್ವಾಲಾಮುಖಿಯಾಗಿ ಪ್ರಕ್ಷುಬ್ಧಗೊಂಡಿತ್ತು. ಆತ ಬಾಯ್ದೆರೆದರೆ ಸಾಕು ಮಾತುಗಳು ಲಾವಾರಸವಾಗಿ ಚಿಮ್ಮುತ್ತಿದ್ದವು. ಅಧ್ಯಾತ್ಮ ಗೀತೆಗಳನ್ನು ರಚಿಸುವಾಗ ರತ್ನಾಕರ ಪ್ರಶಾಂತನಾಗಿರುವನು. ಹಿಂದೆ ಸೂತ್ರ ಹರಿದ ಗಾಳಿಪಟವಾಗಿದ್ದ ತನ್ನ ಬಾಳ್ವಿಗೆ ಈಗ ಒಂದು ನೆಮ್ಮದಿ ದೊರೆತಿದೆ. ಅದರಿಂದ ಗೀತಗಳಲ್ಲಿ ಕಾವು ಕಡಿಮೆ. ಕಾವು ಕಡಿಮೆಯಾದರೂ ಬೆಳಕು ಕಡಿಮೆಯಾಗಿಲ್ಲ.

ಕರ್ಮವೆ ಬಲ್ಲಿತಲ್ಲ, ಜಿನ
ಧರ್ಮವನುಳಿದೆನ್ನ ನೀಪರಿ ಹುಚ್ಚುಮಾಡಿತಲ್ಲ ||ಪಲ್ಲವಿ||

ಭರತೇಶ್ವರನ ಕುಮಾರ ಮರೀಚಿಯ
ನರಕದಿ ಬಹುಮುಖದೊಳಗೆ
ತಿರುಗಿಸಿತೆನ್ನನು ಕೈಯಾರೆ ಹಿಡಿತಂದು
ದರುಶನ ಭ್ರಷ್ಟನ ಮಾಡಿತಲ್ಲ ||೧||

6 ರ.ಶ. ೨೨.

ದೀಪಯಾನ ಮುನಿ ಕೋಪದಿಂ ಬಹುವಿಧ
ಪಾಪವನೆರಪಿ ದುರ್ಗತಿಯೊಳಗೆ
ಆಪತ್ತನುಂಡ ನಾನು ಕ್ರೋಧವನ್ನೊಳಕೊಂಡು
ಈಪರಿ ಹುಚ್ಚು ಹೋದೆನಲ್ಲ ||೨||

ಏಕಾದಶಾಂಗಶ್ರುತವನೋದಿ ಹಲಬರು
ಭೂಕಾಮಿನಿ ಹೊನ್ನಿವಕೆಳಸಿ
ಕಾಕಾದರು ಜಿನಧರ್ಮವ ಸಂಬಂದೆ
ಈಕಡೆ ತಂದುಹಾಕಿತಲ್ಲ ||೩||

ರತ್ನಾಕರವರ್ಣಿಯಾದುದು ಮೊದಲಾಗಿ
ರತ್ನತ್ರಯಾರಾಧಕನೆನಿಸಿ
ಸ್ತುತ್ಯವನಿರದೆಲ್ಲರ ಕೈಯಲಿ ಮಾಡಿಸಿ
ಮತ್ತೆ ಮನ್ನಣೆಗೇಡುಮಾಡಿತಲ್ಲ ||೪||

ಮೂರುಜನ್ಮಕೆ ಮುಕ್ತನಾಗುವೆನ್ನಾತ್ಮನ
ದೂರಿಸಿ ದುರ್ವ್ಯಸನದೊಳಾಡಿಸಿ
ಗಾರೆಳಸಿ ಪಿಡಿದೆಳೆತಂದು ನೂಕಿತು
ಮೀರಬಹುದೆ ಪೂರ್ವಲಿಖಿತವಲ್ಲ ||೫||

ಕರ್ಮವಶದಿ ಕಾರ್ಗತ್ತಲೆ ಕವಿದೆನ್ನ
ಚರ್ಮಕೆ ಲಿಂಗವು ಬಿತ್ತಲ್ಲ
ನಿರ್ಮಲ ಶ್ರೀ ಜಿನಧರ್ಮದೊಳಿದ್ದೆನ್ನ
ಈ ಮೈ ಹುಚ್ಚುಮಾಡಿತಲ್ಲ ||೬||

ದರುಶನ ಶುದ್ಧಿಯೆನ್ನಂತರಂಗ ದೊ–
ಳಿರುತಿಹ ಕಾರಣ ಕವಿತೆಗಳ

ಪರಿಪರಿಯಲಿ ಪೇಳಿ ಸರ್ವರ ಮನಕತಿ
ಹರುಷವಪುಟ್ಟಿಸಿ ನಡೆದೆನಲ್ಲ ||೮||

ಬಿಟ್ಟೆನೆಂಬಿನಿತಿಲ್ಲ ಸುವ್ರತಗಳ
ಬಿಟ್ಟುದಿಲ್ಲ ಏಕತಾಣವದ
ಬಿಟ್ಟುದಿಲ್ಲ ಮೌನಮುಟ್ಟು ಪಾಡಂಗಳ
ಬಿಟ್ಟುದಿಲ್ಲ ಬ್ರಹ್ಮಚರ್ಯವದ ||೯||

ನಿರ್ಮಲ ಜಿನಧರ್ಮವನುಳಿದೆನ್ನನೆಲ್ಲ
ಕರ್ಮಿಗಳು ಜರಿಯದಿಹರೆ!
ಕರ್ಮಿಗಳಾದರಂತಿರಲಿ ನಮ್ಮವನೆಂದು
ಧರ್ಮಿಷ್ಟರು ಕೈಪಿಡಿವುದೆಲ್ಲ ||೧೦||

ಸತ್ಯಸದಾಚಾರ ಸದ್ಧರ್ಮವೆ ಶರಣೆನುವ
ಉತ್ತಮ ಜಿನಕುಲದೊಳು ಹುಟ್ಟಿ
ನಿತ್ಯನಿರಂಜನ ಸಿದ್ಧನೆ ಗತಿಯೆಂದೆನು ರ
ಚಿತ್ತವಲ್ಲದೆ ಪರಭಾವವಿಲ್ಲ ||೧೧||[7]

ಈ ಗೀತೆ ಸಂಶೋಧಕರಿಗೆ ದಾರಿದೀಪವಾಗಿದೆ. ರತ್ನಾಕರನ ಮತಾಂತರವನ್ನು ಪುಷ್ಟೀಕರಿಸುವ ಆಧಾರ ದೊರೆತಂತಾಗಿದೆ. ರತ್ನಾಕರನ ಅಂತರಂಗದ ತಳಮಳ ಪರಿಣಾಮಕಾರಿಯಾಗಿ ಕಾವ್ಯಮಯವಾಗಿ ಅಭಿವ್ಯಕ್ತಗೊಂಡಿದೆ! ಜೊತೆಗೆ ಅಂದಿನ ಜೈನಸಮಾಜದಲ್ಲಿ ಅಡಗಿದ್ದ ಸಮಾಜ ಘಾತುಕ ಶಕ್ತಿಯನ್ನೂ ನಾವು ಕಾಣಬಹುದು. ಕಂದಾಚಾರ ಎಂದು ತಲೆಹಾಕಿತೋ, ವಿಚಾರ ಶೂನ್ಯವಾದ ಸಂಪ್ರದಾಯ ಶರಣತೆ ಎಂದು ಜೈನಸಮಾಜದಲ್ಲಿ ಪ್ರಾರಂಭವಾಯಿತೋ ಅಂದಿನಿಂದ ಜೈನಧರ್ಮ ಖಿಲ

7 ರ. ಕೀ. ಪು ೩೮-೩೯

ಹಾಗುತ್ತಾ ಬಂದಿತು. ರತ್ನಾಕರನನ್ನು ಗೋಳುಹೊಯ್ದುಕೊಂಡು ಯಾರು ಅವನ ಮತಾಂತರಕ್ಕೆ ಕಾರಣರಾದರೋ ಅವರೇ ಅವನನ್ನು ಮತ್ತೆ ಜೈನನಾದಾಗ ಪರಿಹಾಸ್ಯಮಾಡಿ ಗೇಲಿಮಾಡಿರುವರು. ಇದನ್ನು ನೆನೆದು ರತ್ನಾಕರ ನೊಂದಿರುವನು. ಆತ್ಮಸಾಕ್ಷಿಯಾಗಿ ಬಾಳುತ್ತಿರುವೆನಲ್ಲ ಎಂದು ತನಗೆ ತಾನೇ ಸಮಾಧಾನವನ್ನೂ ಮಾಡಿಕೊಂಡಿರುವನು.

"ಆವನುಮಕ್ಕೆ ನಿಮ್ಮಡಿಗಳಂ ನೆನೆವಾತನೆ ನನ್ನ ಬಂಧು …………ಏಕಿನಿತು ಪಕ್ಷವಿದೆಂಬೆಯ ನನ್ನ ಮೆಚ್ಚಿನಾ ದೇವನಂ ನಚ್ಚಿದಾತನೆನಗನ್ಯನೆ ಪೇಳ ಪರಾಜಿತೇಶ್ವರಾ" [8]

ರತ್ನಾಕರ ಸಮವಸರಣದ ಔದಾರ್ಯವನ್ನು ಕಾವ್ಯಮಯವಾಗಿ ಬಣ್ಣಿಸಿರುವನು. ಜಾತಿಮದವನ್ನು ಮೂಲೋತ್ಪಾಟನ ಮಾಡಲು ಮಹಾವೀರ ತೀರ್ಥಂಕರ [9] ಮೂವತ್ತುವರ್ಷಪರ್ಯಂತ ಚಂಡಮಾರುತವಾಗಿ ಭರತಖಂಡವನ್ನೆಲ್ಲ ಸುತ್ತಿ ಧರ್ಮವರ್ಷವನ್ನು ಕರೆದನಾದರೂ ಆ ಮಹಾಪುರುಷನ ಅನಂತರ ಜೈನಸಮಾಜದಲ್ಲಿ ಧಾರ್ಮಿಕ ಔದಾರ್ಯ ಮಂಕಾಯಿತು. ರತ್ನಾಕರನಂತಹ ಮಹಾತ್ಮನೂ ರೋಸಿ ಮತಾಂತರವಾಗಬೇಕಾದರೆ ಅಂದಿಗೆ ಜೈನಸಮಾಜದ ನೈಜ ಚಿತ್ರ ಏನಿರಬಹುದೆಂಬುದನ್ನು ನಾವು ಊಹಿಸಿಕೊಳ್ಳಬಹುದು.

---

8 ಅ. ಶ. ೫೪.

9 ಮಹಾವೀರನ ಜನನ ಕ್ರಿ. ಪೂ. ೫೯೯. ಸನ್ಯಾಸಸ್ವೀಕಾರ ಕ್ರಿ.ಪೂ. ೫೬೯. ತಪಶ್ಚರಣೆ ಕ್ರಿ.ಪೂ. ೫೬೯-೫೭ (೧೨ ವರ್ಷ), ಕೇವಲಜ್ಞಾನಪ್ರಾಪ್ತಿ ಕ್ರಿ.ಪೂ. ೫೫೭. ತೀರ್ಥಂಕರನಾಗಿ ಧರ್ಮಬೋಧೆ ಕ್ರಿ ಪೂ. ೫೫೭-೨೭ (೩೦ ವರ್ಷ), ಮಹಾವೀರನ ನಿರ್ವಾಣ ಕಲ್ಯಾಣ ಕ್ರಿ.ಪೂ. ೫೨೭.

ಆವಾಗಲು ಒಂದೆಪರಿಯಾಗಿಹುದು ಯೋಗಿಯ ಮನ
ಭಾವವಿಶುದ್ಧ ನಿಶ್ಚಯ ತಾಳಿಹುದು ಯೋಗಿಯ ಮನ ||ಪಲ್ಲವಿ||
ಕಾದ ಕಬ್ಬಿಣಕಿತ್ತ ನೀರಿನಂತಿಹುದು ಯೋಗಿಯ ಮನ, ಬಂದ
ಬಾಧೆಯ ಸೈರಿಸಿ ಧ್ಯಾನದೊಳಿಹುದು ಯೋಗಿಯ ಮನ
ಸಾಧಿಸುತಿಹುದು ಕೈವಲ್ಯಸುಖವ ಯೋಗಿಯ ಮನ, ತಾನು
ನಾದಬಿಂದು ಕಲೆಯೊಳು ಕೂಡಿಹುದು ಯೋಗಿಯ ಮನ ||೧||

ಮಣ್ಣೊಳಗಣ ಸುವರ್ಣದಂತಿಹುದು ಯೋಗಿಯ ಮನ
ಹುಣ್ಣಿಮೆ ಚಂದ್ರಮನಂತೆ ತಾನಿಹುದು ಯೋಗಿಯ ಮನ
ಕಣ್ಣು ಹಂಗಿಲ್ಲದೆ ಎಲ್ಲವ ಕಾಂಬುದು ಯೋಗಿಯ ಮನ
ಉಣ್ಣದೆ ತೃಪ್ತಿಪಡೆದು ಸುಖಿಯಹುದು ಯೋಗಿಯ ಮನ
ನೀರೊಳಗಣ ತಾವರೆಯಂತಿಹುದು ಯೋಗಿಯ ಮನ
ಧಾರುಣಿಯ ಕ್ಷಮೆಯನಾಂತಿಹುದು ಯೋಗಿಯ ಮನ, ರನ್ನ
ಮೂರರ ಭೂಷಣದಿಂದ ಮೆರೆವುದು ಯೋಗಿಯ ಮನ ||೩||

.................................................................

ಭೂರಿಗುಣವತಾಳಿ ತೋರದು ಪರರಿಗೆ ಯೋಗಿಯ ಮನ
ಮೂರು ಲೋಕಾಧಿಪರೈಶ್ವರ್ಯ ತೃಣವೆಂಬುದು-
ಯೋಗಿಯ ಮನ ತನ್ನ
ಸೇರಿ ಶುದ್ಧಾತ್ಮನ ಬೆರೆದಿಹುದು ಯೋಗಿಯ ಮನ ||೪||
ಗಗನದಂದದಿ ತಡೆಯಿನಿತಿಲ್ಲದಿಹುದು ಯೋಗಿಯ ಮನ
ಆಗುವ ಕರ್ಮಕೆ ತಾವಗೊಡದಿರುತಿಹುದು ಯೋಗಿಯ ಮನ
ಆಗಲದೆ ಹಂಸನೊಳಡಗಿಹುದು ಯೋಗಿಯ ಮನ
ಸುಗುಣ ಚಿದಂಬರಪುರುಷ ಸ್ವೈಎನುವುದು
ಯೋಗಿಯ ಮನ ||೫|| [10]

---

[10] ರ. ಕೀ. ಪು. ೪೨ ೪೩

ರತ್ನಾಕರ, ಯೋಗಿಯ ಆಂತರಿಕ ಪರಿಣಾಮವನ್ನು ಇಲ್ಲಿ ಸ್ಪಷ್ಟಪಡಿಸಿರುವನು. ತನ್ನಲ್ಲಿ ಮೂಡಿದ ಸಮಚಿತ್ರವನ್ನು ಇಲ್ಲಿ ವಿವರಿಸಿದ್ದರೂ ಇರಬಹುದು.

ಹೊರ ಹೊರಗಾಡಿದರೇನುಂಟು ಒಳ-
ಪರಿದು ನೋಡಿದರಲ್ಲವೆ ದೇವನುಂಟು ||ಪಲ್ಲವಿ||

ಹರಿಹಂಚಾಗಿ ಹೊರಗೆ ಸುಳಿದಾಡಲು
ಕೆರೆ ಮನೆ ಹೊಲನಲ್ಲದೇನುಂಟು ?
ತುರುಬಿ ತನ್ನಮನವ ಮೈಯೊಳಿರಬಿಟ್ಟು
ಅರಸಿ ನೋಡಿದರಾದೇವನುಂಟು ||೧||

ಧ್ಯಾನ ಒಂದಲ್ಲದೆ ಬರಿಸ್ನಾನವ ಮಾಡಲು
ನಿನ್ನ ಮೈಸುಖವಲ್ಲದೇನುಂಟು ?
ಧ್ಯಾನಪೂರಿತನಾಗಿ ಜಪಮಾಡಲು ಮ-
ಹಾನುಭಾವನ ಮುಂದೆ ಕಾಣಲುಂಟು ||೨||

ಅಂಗವ ನೋಡಲೆಲುಬುರಕ್ತಮಾಂಸ ಚರ್ಮದ
ಬೊಂಬುಳಿಯಲ್ಲದೇನುಂಟು ?
ಅಂಗ ಬೇರಾತ್ಮ ಬೇರೆಂದು ನೋಡಿದರಲ್ಲಿ ಬೆಳ
ದಿಂಗಳ ಬೊಂಬೆಯಂತಾ ದೇವನುಂಟು ||೩||

ಗುರುದೇವರೆಂದಿದಿರಿಟ್ಟು ನೋಡಿದರಲ್ಲಿ
ಸುರಪದ ಸುಖವಲ್ಲದೇನುಂಟು ?
ಗುರುಹಂಸನಾಥನ ಧ್ಯಾನಮಾಡಲು ಇರದೆ
ಪರಮಮುಕ್ತಿ ಸುಖವ ಕಾಣಲುಂಟು ||೪|| [11]

---

[11] ರ. ಕೀ. ಪು. ೫೯-೬೦.

ಈ ಗೀತದಲ್ಲಿ ರತ್ನಾಕರ ಭೇದವಿಜ್ಞಾನದ ಮರ್ಮವನ್ನು ಸಾರಿರುವನು. ಭೇದಭಕ್ತಿಯಿಂದ ಸ್ವರ್ಗಸುಖವೂ ನಿರ್ಭೇದ ಭಕ್ತಿಯಿಂದ ಮೋಕ್ಷಸುಖವೂ ಪ್ರಾಪ್ತಿಯಾಗುವುದೆಂದು ಸಾಧ ರಿಗೆ ತಿಳಿಸಿರುವನು. ಆತ್ಮಧ್ಯಾನದ ಶಕ್ತಿಯನ್ನು ಒತ್ತಿ ಸು ದಿರುವನು.

ಆರಿಗೊರೆವೆನೆನ್ನ ನೋವ ಸರ್ವಜ್ಞ ?
ಆರುಂಟು ನೀನಲ್ಲದೆನಗೆ ಸರ್ವಜ್ಞ ||ಪಲ್ಲವಿ||

ಒಂದೇ ಎರಡೇ ನಾನಾಭವದಲ್ಲಿ ಬಂದೆ
ಹೊಂದಿ ಹುಟ್ಟುತ ಕಣ್ಣೀರಲ್ಲಿ ಮಿಂದೆ
ಹಿಂದೆ ಹಲವುಕಾಲ ನಾನಿಂತು ನೊಂದೆ
ಮುಂದೆ ನೀಶರಣಾಗಬೇಕೆನ್ನ ತಂದೆ ||೧

ಹೀನಜನ್ಮದೊಳಾನು ಇಹುದೊಂದು ಇರುವೆ
ನಾನೊಲ್ಲೆನೊಲ್ಲೆ ವಿಸ್ಮಯ ಕಲ್ಪತರುವೆ
ನೀನೊಲ್ಮೆದೋರೊ ಲಾವಣ್ಯದ ತರುವೆ
ಧ್ಯಾನಕೆ ಬಂದೆನ್ನ ಸಲಹೆನ್ನ ಗುರುವೆ ||೨

ಅಭಯವ ಕೊಡು ಕೋಟಿ ಸೂರ್ಯಪ್ರಕಾಶ
ಉಭಯಕರ್ಮವ ಸುಟ್ಟುರುಹೆ ಪಾಪನಾಶ
ತ್ರಿಭುವನಾಗ್ರದೊಳೆನ್ನನಿರಿಸೊ ಸರ್ವೇಶ
ಪ್ರಭುವೆ ಚಿದಂಬರ ಪುರುಷ ಶ್ರೀ ಜಿನೇಶ ||೩|| 12

ರತ್ನಾಕರ ತನ್ನ ಭವ ಭವದ ಪರದಾಟವನ್ನು ಜಿನೇಂದ್ರನ ಮುಂದೆ ಮಂಡಿಸಿ ಇನ್ನಾದರೂ ಉದ್ಧಾರ ಮಾಡಬಾರದೆ ಎಂದು ಮೊರೆಯಿಟ್ಟಿರುವನು.

---

12 ರ. ಕೀ. ಪು. ೬೦-೬೧.

ಇಹಪರವೆರಡರ ಚಿಂತೆಯಿಲ್ಲದೆ
ಬಹುಚಿಂತೆಯ ಮಾಡಿ ಫಲವೇನು ?
ಸಹಜಾತ್ಮತತ್ವದೊಳಡಗದೆ ನಿಚ್ಚ
ಬಹಿರಂಗವ ಚಿಂತಿಸಿ ಫಲವೇನು ? ||ಪಲ್ಲವಿ||

ಜಿನಭಕ್ತಿಯಿಲ್ಲದೆ ಧರ್ಮವ ಗಳಿಸದೆ
ಮನುಜ ಜನ್ಮಕೆ ಬಂದು ಫಲವೇನು ?

..............................................

ಮನವ ದಂಡಿಸಿ ತನ್ನ ನೋಡದೆ ಮೈಯನೆ
ಅನುದಿನ ದಂಡಿಸಿ ಫಲವೇನು ?
ಘನವಿಷವುಳ್ಳ ಸರ್ಪನ ತಡೆಯದೆ ಹುತ್ತ-
ವನೆ ನೋಡಿದೊಡಲ್ಲಿ ಫಲವೇನು ? ||೩||

ನಾಳೆ ಸಾವುಂಟೆಂದು ಬಲ್ಲರೆಲ್ಲರು, ಸಾವ
ಬಾಳನೆಚ್ಚಿರಲಲ್ಲಿ ಫಲವೇನು ?
ಬೀಳುವ ಮರದೊಳುಯ್ಯಾಲೆಯಾಡಿ
ಗೋಳಿಟ್ಟರದರಲ್ಲಿ ಫಲವೇನು ? [13] ||೪||

"ಮೈಯ ಬತ್ತಲೆ ಮಾಡಿ ಮನವ ಕತ್ತಲೆ ಮಾಡಿ ಹುಯ್ಯಲಿಡುತಿಹರು" ಎಂಬ ಮಾತನ್ನೇ ಇಲ್ಲೂ ರತ್ನಾಕರ ಪುನರುಚ್ಚರಿಸಿರುವನು. ಬೀಳುವ ಮರದಲ್ಲಿ ಉಯ್ಯಾಲೆಯಾಡುವುದು ಎಷ್ಟು ಮೂರ್ಖತನವೋ ಅಷ್ಟೇ ಮೂರ್ಖತನ ಸಂಸಾರದಲ್ಲಿ ನೆಚ್ಚಿಗೆಯಿಟ್ಟು ಬಾಳುವುದು ಕೂಡ ಎಂಬ ಉದ್ಗಾರ ಎಷ್ಟೊಂದು ಮಾರ್ಮಿಕವಾಗಿದೆ ?

---

13 ರ. ಕೀ. ಪ್ರ. ೮೧-೮೨.

## ಅಧ್ಯಾತ್ಮರಸ ಗೀತಾಮಂಜರಿ

ಇಲ್ಲಿಯ ಗೀತೆಗಳಿಗೆ ಸಂಪಾದಕರು ಸ್ವರ ಪ್ರಸ್ತಾರ ಹಾಕಿರುವುದರಿಂದ ಹಾಡುವವರಿಗೆ ಮಹದುಪಕಾರವಾಗಿದೆ. ಇದರಲ್ಲೂ ರತ್ನಾಕರ ಮಹೇಂದ್ರಕೀರ್ತಿಗಳನ್ನು ಕೊಂಡಾಡಿರುವನು.[14] ತಾನು ಮತಾಂತರವಾಗಿ ಮತ್ತೆ ಹಿಂದಿರುಗಿದುದನ್ನೂ ಇದರಲ್ಲಿ ಪಶ್ಚಾತ್ತಾಪದಿಂದ ಹಾಡಿರುವನು.[15] ಎರಡು ಕೃತಿಗಳಲ್ಲೂ (ರತ್ನಾಕರನ ಕೀರ್ತನೆ, ಅಧ್ಯಾತ್ಮರಸ ಗೀತಾಮಂಜರಿ) ಈ ಗೀತೆಗಳು ಅಚ್ಚಾಗಿವೆ. "ಇಹಪರವೆರಡು ಚಿಂತೆ ಬೇಕಲ್ಲದೆ ಬಹು ಚಿಂತೆಯೊಳು ಬಾಳಿ ಫಲವೇನು?" "ಹೊರಹೊರಗಾಡಿದರೇನುಂಟು?" ಎಂಬ ಗೀತೆಗಳು ಎರಡು ಕೃತಿಯಲ್ಲೂ ಒಂದೇ ಸಮನಾಗಿ ಬಂದಿವೆ.

ರಾಗ— ನಾದನಾಮಕ್ರಿಯೆ, ಆದಿತಾಳ

ಏನ ಬೇಕು | ಎನಗಿ | ನ್ನೇನು ಬೇಕು ||ಪಲ್ಲ||
ನಾನು ನನ್ನ ದಿವ್ಯರೂಪ | ನನ್ನ ದೇಹದಿ ಕಂಡ ಮೇಲೆ ||ಅ||ಪ||
ಕಂಗಳು ಮನವು ಒಂದೇ | ಬಾರಿ ಸೂರೆಗೊಂಬ ಬೆಳ ||
ದಿಂಗಳ ಬೊಂಬೆಯನೆನ್ನ | ಕಣ್ತುಂಬ ಕಂಡ ಮೇಲೆ ||೧||
ಆಶೆ ರೌದ್ರ ಮೋಹಂಗಳು | ಕಡೆಗೊತ್ತುತ್ತ ಕಾಂತಿಯನ್ನೆ ||
ಸೂಸುವ ಸುಜ್ಞಾನಮಯನ | ಶುದ್ಧವಾಗಿ ಕಂಡ ಮೇಲೆ ||೨||
ಸೋಜಿಗವಿದೆಂದು ಮುನ್ನ | ಕಂಡು ಕೇಳಿದಲ್ಲಿ ||ಅ||ಪ||
ರಾಜಿತೇಶನ ಎನ್ನೊಳು ನಾನು | ನೈಜವಾಗಿ ಕಂಡ ಮೇಲೆ ||೩||[16]

---

[14] ಅ. ಗೀ. ಮಂ. ಪು. ೩೦. [15] ಅ. ಗೀ. ಮಂ. ಪು ೩೦.

[16] ಅ. ಗೀ. ಮಂ, ಪು. ೧೭.

ಈ ಗೀತದಲ್ಲಿ ಸಡಗರ ಹಾಗು ಸಂಭ್ರಮ ತುಂಬಿ ತುಳುಕಾಡು ವುದು. ಹಂಸಕಲೆಯ ಅರುಣೋದಯವಾದಾಗ ರತ್ನಾಕರ ಹಿಗ್ಗಿ ಹಿಗ್ಗಿ ಕುಣಿದಿರುವನು.

॥ ಪುನ್ನಾಗರಾವಳಿ ॥—॥ ಆದಿತಾಳ ॥

ಆರೆಂದರಿಯರಲ್ಲಾ | ಇವ | ನಾರೆಂದರಿಯರಲ್ಲಾ ||ಪ||

ಒಂದು | ಕಾರಣದೊಳಗೆ ಆಡುತಿಪ್ಪವನಾ | ಸಂ |
ಸಾರ ಸಮುದ್ರದೊಳಾಡುತ್ತಿರುವನಾ ||
ಹಿಂದೆ ಬಾರದ ಭವದಲ್ಲಿ ಬಂದವನ || ಮುಂದೆ |
ಸಾರಸುಖಂಗಳ ಪಡೆಯಲಿರುವನಾ ||೧||

ಬಿಸಲಿಗೆ ಬಾಡದ ಬೆಂಕಿಗೆ ಸುಡದಾ |
ಮಸೆದಲಗಿನ ಧಾರೆಗಳನು ಒಡೆದಾ ||
ಅಸಮಗುಣವನಡಗಿಸಿ ರೋಗವಿಲ್ಲದೆ
ಹುಸಿಗೆ ಸರಳಿ ಹೊತ್ತುಗಳಿಯುತ್ತಿರುವವನ ||೨||

ರೂಪ ನೋಡಿದರೆ ಬೆಳಗುವ ಮಾಣಿಕ್ಯ |
ದೀಪಕೆ ಸರಿಮಿಗಿಲೆನಿಸುತ್ತಿರುವವನ ||
ಪಾಪಪುಣ್ಯವೆಂಬ ಸರಪಣಿಯೊಳಗಿದ್ದು |
ಈ ಪರಿಯಲಿ ಸುತ್ತಾಡುತ್ತಿರುವವನ ||೩||

ಸಾಕೆಂದಡಗಿದನಾದರೆ ಪರಮ ನಿ |
ರಾಕಾರವ ಕೈಗೊಂಬುವನಾ ||
ಬೇಕೆಂದು ನೆನೆದರೆ ತನ್ನ ರೂಪಿಗೆ ಮೂರು |
ಲೋಕವು ಮೆಚ್ಚುವಪರಿಯಲಿ ಹೆಚ್ಚುವನಾ ||೪||

ಕ್ರೋಧಮಾನ ಮಾಯಲೋಭ ಮುಂತಾದ |
ಭೇದಿಸಿ ಕೇವಲ ಬೋಧದಿಂದಾ ||

ಈ ಧರೆಯಲಿ ಶೃಂಗಾರ ಕವಿಯ ಆ ।
ರಾಧಕ ಸಮುದ್ರಾಧೀಶನೊಳೈಕ್ಯನ [17] ॥೫॥

ಭರತೇಶವೈಭವದಲ್ಲೂ ರತ್ನಾಕರ ಹಾಗು ಅಪರಾಜಿತೇಶ್ವರ ಶತಕಗಳಲ್ಲೂ ಹೇಳಿರುವ ಆತ್ಮಸ್ವರೂಪ, ಆತ್ಮವಿಜ್ಞಾನ, ಹಂಸ ಕಲೆ ಹಾಗು ಭೇದವಿಜ್ಞಾನಗಳನ್ನೇ ರತ್ನಾಕರ ಕವಿ ಗೀತಗಳಲ್ಲೂ ಎರಕ ಹೊಯ್ದಿರುವನು. ಸುಲಭವಾಗಿ ಸರಳವಾಗಿ ಸುಂದರವಾಗಿ ತನ್ನ ದರ್ಶನವನ್ನು ಇಲ್ಲೂ ಪ್ರತಿಪಾದಿಸಿರುವನು. ಗೀತದಲ್ಲಿ "ಶೃಂಗಾರ ಕವಿ ಹಂಸರಾಜ", "ಚಿದಂಬರ ಪುರುಷ, ಅಪರಾಜಿತೇಶ್ವರ" ಹಾಗು "ನಿರಂಜನ ಸಿದ್ಧ" ಈ ಮಾತುಗಳು ಆಗಾಗ ಬಂದಿರುವುದರಿಂದ ಕವಿಚರಿತೆಕಾರರು ರತ್ನಾಕರ ಶತಕದ ಕರ್ತೃವಿನ ಬಗ್ಗೆ ಮಾಡಿರುವ ಅನುಮಾನದ ಮೇಲೆ ಗದಾಪ್ರಹಾರವಾದಂತಿದೆ.

ಶಂಕರಾಭರಣ—ಅಷ್ಟತಾಳ

ತಿಳುಹಿದರಿಲ್ಲವಯ್ಯಾ ಬಲ್ಲವರೆನಗೆ
ತಿಳುಹಿದರಿಲ್ಲವಯ್ಯ ॥ಪ॥

ತಿಳುಹಿದರಿಂದೂತನಕ ಕಷ್ಟಸಂಸಾರ ।
ದೊಳಗೆ ನಾನೀತನಕ ತೊಳಲುವೆನೇ ॥ಅ॥ಪ॥

ಹೀನವಿಷಯವ ತ್ಯಜಿಸೂ । ವಿಷವೆಂಪು ॥
ಜ್ಞಾನಕ್ಷೀರವ ಸೇವಿಸೂ ॥
ತಾನೇ ಕೆಡುವ ಮೈಯ ತಪಸ್ಸಿಗೆ ಸಲಿಸೂ, ನಿ ।
ತ್ಯಾನಂದ ಶಿವಪದವಿಯ ಪಡೆ ನೀನೆಂದು ॥೧॥

---

17 ಆ. ಗೀ. ಮಂ. ಪು. ೭.

ಕಾಕುಕಥೆಯ ಕಿವಿಗಳಲಿ ಕೇಳದಿರು, ಶ |
ಲಾಕಪುರುಷರಿಹ ಕಥೆಗಳ ಕೇಳೂ ||
ವಾಕುಮನದ ಬಯಲೊಳಗೆ ಆಡದೆ, ರ |
ತ್ನಾಕರಾಧೀಶ ತಾನೇ ಕಾಣು ನೀನೆಂದು ||೨||

ರಾಗದ್ವೇಷವನುಳಿದೂ ಸಲೆ ಶಾಂತ |
ನಾಗಿ ಕರ್ಮವ ಗೆಲಿದೂ ||
ಯೋಗಿ ಮಹೇಂದ್ರ ಕೀರುತಿಯಂತೆ ಕರುಣಾಳು |
ವಾಗಿ ಗಲ್ಲವನಲುಗಿಸಿ ಧರ್ಮವ ಪೇಳಿ [18] ||೩||

ತನಗೆ ಮಾರ್ಗದರ್ಶನ ಮಾಡಿದ ಮಹೇಂದ್ರ ಕೀರ್ತಿಗಳನ್ನು ಅನುಪಮರೆಂದು ಹೊಗಳಿರುವನು. ಇದಕ್ಕೆ ಮುನ್ನ ಧರ್ಮಪಥವನ್ನು ತನಗೆ ತಿಳಿಸಿದವರೇ ಇಲ್ಲ ಎಂದು ಸಂಕಟಗೊಂಡಿರುವನು.

**ಕಲ್ಯಾಣಿ—ಅಷ್ಟತಾಳ**

ಆತ್ಮನ ನೀ ಧ್ಯಾನಿಸು | ದಿನನಿತ್ಯ | ಆತ್ಮಬಾಹ್ಯರ-
ಮಾತಕೇಳದಿರು ಮನುಜಾ ||ಪ||

ಕಲಿವರು ಶಾಸ್ತ್ರವ ಕೆಲರು | ಮೆಯ್ಯ | ಒಲಿದು
ದಂಡಿಸುವರು ಕೆಲರು || ಲಲಿತಾತ್ಮ ಧ್ಯಾನಕೆ-
ಮುನಿವರು ಗರ್ವ | ಸುಲಭರವರು ಡಾಂಭಿಕರೆಂದು ನಂಬು ||೧||

ಭವಿಗಾತ್ಮಧ್ಯಾನವೆ ಬಾರದು | ಅಸು | ಭವದ ಧ್ಯಾನಿಯು
ಕಂಡು ಜರೆವರು || ಭವಿಗಳ ನಿಜಗುಣವಿದು
ಎಂದು ನಂಬು | ನೀ | ನವರ ಲೆಕ್ಕಿಸದಿರು ನಿನ್ನ
ನೀ ನೋಡು ||೨||

---

18 ಅ. ಗೀ. ಮಂ. ಪು. ೨೬.

ಕಾಲವಲ್ಲೆಂಬದು ಕೆಲರು । ಗೃಹವಾಸಿ । ಗಿಲ್ಲೆಂದು
ಪೇಳ್ವರು ಕೆಲರು ॥ ಮೇಲು ಶಾಸ್ತ್ರಂಗಳು ಸಾಕೆಂಬರು
ಶಬ್ದ । ಮಾಲೆಯ ತೋರಿಸಿ ಪೂಸೈಸುತಿಹರು ॥೩॥

ಕಲಿಕಾಲಕುಂಟಾತ್ಮಧ್ಯಾನ । ಮುನಿ । ಗಳಿಗುಂಟು ಗೃಹಸ್ಥ
ರಿಗುಂಟು ॥ ಬಲು ಶಾಸ್ತ್ರಿ ಬಡ ಶಾಸ್ತ್ರಿಗಳಿಗುಂಟು ।
ಭವ್ಯ । ತಿಲಕರಿಗುಂಟು । ಅಭವ್ಯರಿಗಿಲ್ಲಾ ॥೪॥

ಸಾರಭವ್ಯರಿಗುಂಟು ಧ್ಯಾನ । ಮತ್ತೆ । ದೂರಭವ್ಯ
ರಿಗನುಮತ ಧ್ಯಾನ ॥ ವೈರವು ಸಿರ್ಭವ್ಯರಿಗೆ
ಧ್ಯಾನತತ್ವದ ಸಾರವಿದು ಅಪರಾಜಿತೇಶನ ಶಾಸನ [19] ॥೫॥

ರತ್ನಾಕರ "ಭವಿ" ಎಂಬ ವೀರಶೈವ ಪರಿಭಾಷೆಯನ್ನು ಇಲ್ಲಿ ನಿಸ್ಸಂಕೋಚವಾಗಿ ಬಳಸಿರುವನು. ಮೂಲದ ಅರ್ಥವನ್ನು ಇಲ್ಲೂ ಉಳಿಸಿಕೊಂಡಿರುವನು. ಭವ್ಯರಾದವರೆಲ್ಲ ಅವರು ಯಾವ ಅವಸ್ಥೆಯಲ್ಲೇ ಇರಲಿ "ಧ್ಯಾನ"ಕ್ಕೆ ಅರ್ಹರಾಗುವರೆಂದು ಘೋಷಿಸಿರುವನು. ಚೇತನವನ್ನು ಅದರದರ ಸಂಸ್ಕಾರದಿಂದ ಭವ್ಯನೇ ಅಭವ್ಯನೇ ಎಂದು ವಿಂಗಡಿಸುವುದು ಜೈನಧರ್ಮದ ರಹಸ್ಯ.

ಮೇಲಿನ ಗೀತೆ, ಸಾಂಗತ್ಯವಾಗಿ ಭರತೇಶವೈಭವದಲ್ಲೂ ಬಂದಿದೆ. ವೈಭವದ ಸಾಂಗತ್ಯವೇ ಗೀತರೂಪವನ್ನು ತಳೆದು ಇಲ್ಲಿ ರಾರಾಜಿಸಿದೆ.

ಬಾರದು ತನುಗಾತ್ಮಯೋಗವು ಯೋಗ ಬಂ ।
ದಾರಾಧಿಪರನು ಜರೆವರು ॥

---

19 ಅ. ಗೀ. ಮಂ. ಪು. ೩೧.

ನಾರಿಗಿಲ್ಲೆಂದು ಗೃಹಸ್ಥರಿಗಿಲ್ಲೆಂದು |
ಹೋರುವರು ಮೂರ್ಖರ ಬಲೆ ||೧೨||
ಬಹು ಶಾಸ್ತ್ರ ಬೇಕು ನಿರ್ವಾಣ ಬೇಕಾಧ್ಯಾನ |
ವಿಹರಣೆಗೆಂದು ಕಾಡುವರು ||
ಬಹು ಶಾಸ್ತ್ರಿಯಾಗಿ ನಿರ್ವಾಣಿಯಾಗಿಯು ಧ್ಯಾನ |
ರಹಿತರಾಗಿಹರು ತಾವಬಲೆ ||೧೪||
ಬಂದರೆ ಧ್ಯಾನಿಸಬೇಕು ಬಾರದಿರೊಲ |
ವಿಂದ ಧ್ಯಾನವ ನಂಬಬೇಕು ||
ನಿಂದಿಸುತಿಹುದು ನಿರ್ಭವ್ಯರ ಗುಣವದು |
ಕುಂದಿದರುಂಟೆ ಸಮ್ಯಕ್ತ್ವ ||೧೫||
ಇಂತು ನೀವೆಲ್ಲ ರಾಚರಿಸಿದಿರಾದರೆ | ಕಾಂತೆಯರೆನಿಪ ರೂಪಳಿದು||
ಮುಂತೆ ಸ್ವರ್ಗವನ್ನೈದಿ ಮುಕ್ತರಾಗುವಿರಿ ಸಿ |
ದ್ಧಾಂತವೆಂದಿದ ನಂಬಿರೆಂದಾ ||೧೬|| [20]

ಹದಿನಾರನೆಯ ಪುಸುವಾದ ಭರತೇಶ ವಿಚಾರಶೂನ್ಯವಾದ ಕಂದಾಚಾರವನ್ನು ನಿಂದಿಸಿರುವನು. ತನ್ನ ಮನೋವಲ್ಲಭೆಯರನ್ನೂ ಧ್ಯಾನಾಸಕ್ತರಾಗುವಂತೆ ಪ್ರೇರೇಪಿಸಿರುವನು.

ರಾಗ—ನಾದನಾಮಕ್ರಿಯೆ, ಅಷ್ಟತಾಳ

ಧ್ಯಾನಿಸು ನಿನ್ನ ನಿಜಾತ್ಮನಾ | ಈ |
ಧ್ಯಾನವಿಲ್ಲದೆ ಮುಕ್ತಿ ನಿನಗಿಹುದೇ ಮನುಜಾ ||ಪ||
ಕೆಂಬಜ್ಜೆಯಿಂದ ಮಸ್ತಕ **ಮೂರು ದೇಹದಿ** ||
ತುಂಬಿರುತಿಹ ಪರಂಜ್ಯೋತಿಯನೂ ||
ಬಿಂಬವ ಕಣ್ಣಾರೆ ಮುಚ್ಚಿನೋಡಲು ಪ್ರಭೆ |
ಬಿಂಬಿಸುತ್ತಿರುವುದು ನಿನ್ನೆದೆಯೊಳಗೆ ||೧||

20 ಭ. ವೈ. ಸಂ. ೧೭.

ಕರ್ಮವ ನೊಯ್ಯನೆ ಸುಡುತಿಹುದೂ । ಜ್ಞಾನ ।
ನಿರ್ಮಲವಾಗಿ ಡಾಳಿಸುತಿಹುದೂ ॥
ಕರ್ಮಾಣುಗಳ ಶಕ್ತಿ ಕೆಡುತಿಹುದು ಮಹಾ ।
**ಧರ್ಮದ** ಸಾರವಿದೆಂದು ನೀನಂಬು ॥೨॥

ಅರಿಯೋ ನೋಟದಿ ಸೌಮ್ಯನ । ಮೈ ।
ಮರೆಯೊಳಗಿಹ ಪರಬೊಮ್ಮನಾ ॥
ಮೆರೆವ ನಿರಂಜನಸಿದ್ಧನ ನೀನಿತ್ಯ ।
ಅರಿತು ಧ್ಯಾನಿಸೆ ಮುಕ್ತಿ ನಿನಗೆ ಲಭಿಸುವುದು [21] ॥೩॥

ಮೂರು ದೇಹ=ಜೈನ ಸಿದ್ಧಾಂತದ ಪ್ರಕಾರ ಪ್ರತಿಯೊಂದು ಜೀವಿಗೂ ಔದಾರಿಕ, ತೈಜಸ ಹಾಗು ಕಾರ್ಮಣವೆಂಬ ಮೂರು ದೇಹಗಳಿವೆ. ದೇವ ಹಾಗು ನಾರಕಿಗಳಿಗೆ ಔದಾರಿಕ ಕಾಯಕ್ಕೆ ಬದಲಾಗಿ ವೈಕ್ರಿಯಕ ಕಾಯ, ತೈಜಸ ಮತ್ತು ಕಾರ್ಮಣ ಕಾಯಗಳಿರುತ್ತವೆ. ಜೀವಿ ಸತ್ತರೆ ಕೇವಲ ಔದಾರಿಕ ಅಥವಾ ವೈಕ್ರಿಯಕ ಕಾಯಗಳನ್ನು ಮಾತ್ರ ತೊರೆಯುವುದು. ಉಳಿದೆರಡು ಕಾಯಗಳೂ ಜೀವಿಯನ್ನು ಬೆನ್ನಹತ್ತಿದ ಭೇತಾಳಗಳಂತೆ ಸತ್ತರೂ ಬಿಡದೆ ಹಿಂಬಾಲಿಸುವುವು. ಸಿದ್ಧ ಪರಮೇಷ್ಠಿಯಾದಾಗ ಮಾತ್ರ ಮೂರು ದೇಹಗಳೂ ಲಯವಾಗುವುವು.

ಧರ್ಮ—ಧ್ಯಾನದಲ್ಲಿ ಧರ್ಮಧ್ಯಾನವೆಂದೂ ಶುಕ್ಲಧ್ಯಾನವೆಂದೂ ಎರಡು ಬಗೆ. ಧರ್ಮಧ್ಯಾನ ದೀಪದ ಕುಡಿಯಂತೆ ಚಂಚಲತೆಯಿಂದ ಕೂಡಿದ್ದರೆ ಶುಕ್ಲಧ್ಯಾನ ಸೂರ್ಯಬಿಂಬದಂತೆ ನಿಶ್ಚಲವಾಗಿ ತೊಳಗುವುದು.

ಗೀತದಲ್ಲೂ ರತ್ನಾಕರ ಹಂಸಕಲೆಯ ಜೇನ್ಮಳೆಯನ್ನು ಕರೆದಿರುವನು. ಅಧ್ಯಾತ್ಮವನ್ನೂ ರಸವತ್ತಾಗಿ ಬಿತ್ತರಿಸಿ ಬೆಡಗು

---

21 ಅ. ಗೀ. ಮಂ. ಪು. ೩೯.